ಸಂಪುಟ : 6 ಬೆಲೆ 50 ಪೈಸೆ
ಸಂಚಿಕೆ : 4–5 ಮಾರ್ಚ್ : 1982

# ಪಂಚಮ

# ನೋವುಗಳ ನಡುವೆ ಮೂಡಿಬಂದವರೇ, ಕಣ್ತೆರೆಯಿರಿ

ವರದಿ— ಮುಳ್ಳೂರು ನಾಗರಾಜ

ಇಂಡಿಯಾದಲ್ಲಿ ದಲಿತರ ರಕ್ತ ಕೋಡಿಯಾಗುತ್ತಿದೆ. ಕ್ರೂರ ಹತ್ಯಾಕಾಂಡಗಳು ನಮ್ಮ ದೈನಂದಿನ ಬದುಕಾಗುತ್ತಿವೆ. ಕೊಲೆ ಸುಲಿಗೆಗಳ ಪ್ರವಾಹದಿಂದ, ಈ ನಾಡಿನ ಚರಿತ್ರೆ ಕಳಂಕಿತವಾಗಿದೆ. ದೇವ್ಲೋಲಿ ಸಾಧುಪುರ ರಾಯಪುರ ಕಗ್ಗೊಲೆಗಳು ನಾವು ಜೀವಭಯದಿಂದ ತಲ್ಲಣಿಸುವಂತೆ ಮಾಡಿವೆ. ಕಳೆದ ಫೆಬ್ರುವರಿ 27ರಂದು ದಲಿತಮಂತ್ರಿ ಶಾಸಕರ ವಿರುದ್ಧ ಕರ್ನಾಟಕದಾದ್ಯಂತ ದ.ಸಂ.ಸ. ಧರಣಿ ನಡೆಸಿದೆ. ದೇಶದಾದ್ಯಂತ ನಡೆಯುತ್ತಿರುವ ದಲಿತರ ಕೊಲೆ ಸುಲಿಗೆಗಳ ವಿರುದ್ಧ ದಲಿತ ಸಂಘರ್ಷ ಸಮಿತಿಯ ಚಾರಿತ್ರಿಕ ಪ್ರತಿಭಟನೆ ಇದು. ಯಾರೊಬ್ಬರ ಮೇಲಿನ ವೈಯಕ್ತಿಕ ದ್ವೇಷದಿಂದ ಅಥವಾ ರಾಜಕೀಯ ಲಾಭಕ್ಕಾಗಿ ನಾವು ಇದನ್ನು ನಡೆಸಲಿಲ್ಲ. ''ದಲಿತರ ರಕ್ತ ಬೀದಿಯ ಮೇಲೆ ಹರಿಯುತ್ತಿದೆ. ಕೊಲ್ಲುವವರಿಂದ ನಮ್ಮನ್ನು ರಕ್ಷಿಸಿ; ದಲಿತರ ಕಗ್ಗೊಲೆಗಳನ್ನ ಮಾನವೀಯ ದೃಷ್ಟಿಯಿಂದ ಪ್ರತಿಭಟಿಸಿ'' ಎಂಬುದು; ದಲಿತ ಮಂತ್ರಿ ಶಾಸಕರಿಗೆ ನಮ್ಮ ಮನವಿಯಾಗಿತ್ತು. ಪ್ರಾಣರಕ್ಷಣೆಗಾಗಿ ದಲಿತರಿಗೆ ಬಂದೂಕಗಳನ್ನು ಕೊಡಿರೆಂದು ಒತ್ತಾಯಿಸಿದ್ದೆವು. ಈ ಸಂದರ್ಭದಲ್ಲಿ ನಮಗೆ ಎದುರಾದ ಅನುಭವಗಳು ಅಪಾರ. ಆದರೆ ನಮ್ಮ ಮಂತ್ರಿ ಶಾಸಕರ ನಿದ್ರೆಯ ಮಂಪರು ಇನ್ನೂ ಇಳಿದಿಲ್ಲ.

ನಾವು ದಲಿತ ಮಂತ್ರಿಶಾಸಕರ ವಿರುದ್ಧ ಧರಣಿ ನಡೆಸಿರುವುದನ್ನ ಕಂಡು ಮೇಲ್ಜಾತಿಯ ಮಂತ್ರಿಶಾಸಕರು ಖುಷಿಪಡಬೇಕೆಂದಿಲ್ಲ. ಇಂಥ

[7ನೆಯ ಪುಟಕ್ಕೆ]

## ಏಪ್ರಿಲ್ 14 : ಪ್ರತಿಭಟನಾ ದಿನ

ಒಂದರ ಮೇಲೆ ಒಂದರಂತೆ ದಲಿತರ ಕಗ್ಗೊಲೆಗಳು ನಡೆದಾಗಲೂ ಆಗಾಗ್ಗೆ ಏನೇನೂ ಕ್ರಮ ಕೈಗೊಳ್ಳದೆ ಮೌನ ತಾಳಿರುವ "ದಲಿತೋದ್ಧಾರಕ ಕಾಂಗ್ರೈ" ಸರ್ಕಾರದ ವಿರುದ್ಧ ಪ್ರತಿಭಟಿಸುವ ಎರಡನೇ ಹಂತದ ಕಾರ್ಯಕ್ರಮವಾಗಿ ಕರ್ನಾಟಕ ದಲಿತ ಸಂಘರ್ಷ ಸಮಿತಿಯು ಅಂಬೇಡ್ಕರ್ ಅವರ ಜನ್ಮದಿನವಾದ ಏಪ್ರಿಲ್ 14ನ್ನು ಪ್ರತಿಭಟನಾ ದಿನವಾಗಿ ಆಚರಿಸಲು ನಿರ್ಧರಿಸಿದೆ. ಅಂದು ಬೆಂಗಳೂರಿನಲ್ಲಿ ನಡೆಯುವ ಭಾರಿ ಪ್ರತಿಭಟನಾ ಮೆರವಣಿಗೆ ಮತ್ತು ಸಭೆಯಲ್ಲಿ ದಕ್ಷಿಣ ಇಂಡಿಯಾದ ಅನೇಕ ದಲಿತ ನಾಯಕರು ಭಾಗವಹಿಸಲಿದ್ದಾರೆ.



ಮೈಸೂರಿನ ವಿಧಾನಪರಿಷತ್ ಸದಸ್ಯ ಎಂ. ಶಿವಣ್ಣ ಅವರ ಮನೆ ಮುಂದೆ ಮೈಸೂರು ಡಿ.ಎಸ್. ಎಸ್ ನಡೆಸಿದ ಧರಣಿಯ ನೋಟ.

## ಇಂದಿರಾ ಆರಾಧಕ ದಲಿತರೇ ಎಚ್ಚರ ಎಚ್ಚರ!

ಇಂಡಿಯಾದ ಸಮಸ್ತ ಅಧಿಕಾರವನ್ನೆಲ್ಲ ತನ್ನ ಹಸ್ತದಲ್ಲಿ ಕೇಂದ್ರೀಕರಿಸಿಕೊಂಡು ಸಾವಿರಾರು ಅನಾಯಕ ದಲಿತರ ಕಗ್ಗೊಲೆಗೆ ಹೊಣೆಗಾರ್ತಿಯಾಗಿರುವ ಶ್ರೀಮತಿ ಇಂದಿರಾ ಗಾಂಧಿಯವರು ಮಾರ್ಚ್ ೪ರ ಗುರುವಾರದಂದು ರಾಜ್ಯಸಭೆಯಲ್ಲಿ ತಮ್ಮ ಮೀಸಲಾತಿ ವಿರೋಧಿ ನಿಲುವನ್ನು ಬಹಿರಂಗ ಪಡಿಸಿ ದಲಿತರನ್ನೆಲ್ಲ ಸಂಪೂರ್ಣ ಮಟ್ಟ ಹಾಕುವುದಕ್ಕೆ ನಾಂದಿಹಾಡಿದ್ದಾರೆ! "ಜಾತಿ ಅಥವಾ ಬೇರೆ ಆಧಾರದ ಮೇಲೆ ಮೀಸಲಾತಿ ಅಗತ್ಯವಾಗದಂತೆ ಅತ್ಯಂತ ದುರ್ಬಲರು ಮತ್ತು ಬಡವರನ್ನು ಮೇಲೆತ್ತಲು ಸರ್ಕಾರ ಪ್ರಯತ್ನಿಸುತ್ತಿದೆ"ಎಂದು ಹೇಳಿರುವ ಇಂದಿರಾ ಗಾಂಧಿಯವರು ಅಸ್ಪೃಶ್ಯತೆ ಮತ್ತು ಜಾತಿ ಆಧಾರದ ಮೇಲೆ ದಲಿತರಿಗೆ ದಕ್ಕುತ್ತಿರುವ ಮೀಸಲಾತಿ ಸವಲತ್ತುಗಳನ್ನೆಲ್ಲ ಕಸಿದುಕೊಳ್ಳುವ ಸನ್ನಾಹದಲ್ಲಿದ್ದಾರೆ! "ಜಾತಿ ಆಧಾರಿತ ಮೀಸಲಾತಿಯಿಂದ ಅರ್ಹತೆಗೆ ಧಕ್ಕೆ" ಎಂದು ಕೂಗಾಡುವ ಬ್ರಾಹ್ಮಣಶಾಹಿ ಶಕ್ತಿಗಳಿಗೆ ಕುಮ್ಮಕ್ಕಾಗಿ ನಿಂತು ಈ ಮಾತನ್ನಾಡಿರುವ ಇಂದಿರಾ ಅವರು ಕಳೆದ ವರ್ಷ ಅನೇಕ ದಲಿತರನ್ನು ಬಲಿತೆಗೆದುಕೊಂಡ "ಮೀಸಲಾತಿ ವಿರೋಧಿ" ಚಳುವಳಿಗೆ ಈಗ ಮತ್ತೊಮ್ಮೆ ಗಾಳಿಬೀಸುತ್ತಿದ್ದಾರೆ!

ಆದ್ದರಿಂದ ಇಂದಿರಾ ಆರಾಧಕ ಮುಗ್ಧ ದಲಿತರೆಲ್ಲ ವಾಸ್ತವದ ಬಗ್ಗೆ ಕಣ್ಣು ತೆರೆಯಬೇಕಾಗಿದೆ. ಮಿದುಳಲ್ಲಿ ಕಶ್ಮಲವನ್ನು ತುಂಬಿಕೊಂಡ ಜಾತ್ಯಾಂಧ ಹಿಂದೂಗಳು ದಲಿತರ ಕೇರಿಗಳಿಗೆ, ದಲಿತರ ಆಸೆಗಳಿಗೆ ಬೆಂಕಿ ಹಚ್ಚುವ ಮೊದಲೆ ಎಚ್ಚರಗೊಂಡು ಸಂಘಟಿತರಾಗಿ ಎದ್ದು ನಿಲ್ಲಬೇಕಾಗಿದೆ.

# ಪ್ರಿಂಟರ್ಸ್ ಪ್ರಕಾಶನ

16, ಮಹಾತ್ಮಗಾಂಧಿ ರಸ್ತೆ, ಬೆಂಗಳೂರು-560 001

ಕನ್ನಡದಲ್ಲಿ ಉತ್ತಮ ಹಳೆಯ-ಹೊಸ ಲೇಖಕರ ಕಥೆ, ಕಾದಂಬರಿ, ನಾಟಕ,
ಮಕ್ಕಳ ಸಾಹಿತ್ಯ, ವಿಚಾರ ಸಾಹಿತ್ಯ, ಬೇರೆ ಭಾಷೆಗಳ ಅನುವಾದಿತ
ಕೃತಿಗಳು, ವಿಜ್ಞಾನ, ಮಾನವಿಕ ಶಾಸ್ತ್ರ ಇತ್ಯಾದಿ ಪುಸ್ತಕಗಳನ್ನು
ಸುಲಭ ಬೆಲೆಯಲ್ಲಿ ಓದುಗರಿಗೆ ಕೊಡುವ ಹೊಸ ಪ್ರಕಾಶನ ಸಂಸ್ಥೆ.
ಮೊದಲ ಪ್ರಕಟಣೆಗಳು ಸಧ್ಯದಲ್ಲೇ ಮಾರುಕಟ್ಟೆಗೆ ಬರಲಿವೆ.



ಮಾಲೀಕರು : ದಿ ಪ್ರಿಂಟರ್ಸ್ (ಮೈಸೂರು) ಲಿಮಿಟೆಡ್.

# ಆತ್ಮವಿಶ್ವಾಸ ಮೂಡಿಸುವತ್ತ ಬಂಡಾಯ ಸಾಹಿತ್ಯ

ದೇವಯ್ಯ ಹರವೆ

ರಾಜ್ಯಮಟ್ಟದ ಮೂರನೆಯ ಬಂಡಾಯ ಸಾಹಿತ್ಯ ಸಮ್ಮೇಳನವನ್ನು ಪುಸ್ತಕ ಬಿಡುಗಡೆಯ ಮೂಲಕ ದೇವನೂರು ಮಹಾದೇವ ಅವರು ಉದ್ಘಾಟಿಸಿದರು, ಸಮ್ಮೇಳನದ ಆಶಯವನ್ನು ವಿವರಿಸುತ್ತಾ ಬಂಡಾಯ ಸಾಹಿತ್ಯ ಸಂಘಟನೆ ನಿರ್ದಿಷ್ಟವಾದ ಸಾಮಾಜಿಕ ರಾಜಕೀಯ ಪ್ರಜ್ಞೆಯ ಅರಿವುಳ್ಳ ಸಾಹಿತಿಗಳಿಂದ ಮುಂದುವರಿಯುತ್ತಿದೆ. ನಮ್ಮ ಹೋರಾಟ ಸಾಂಸ್ಕೃತಿಕ ಕ್ಷೇತ್ರದಲ್ಲಿ ವೈಚಾರಿಕ ಜಾಗೃತಿಯನ್ನುಂಟು ಮಾಡುವುದಾಗಿದೆ ಎಂದು ಬಂಡಾಯ ಸಾಹಿತ್ಯ ಸಂಘಟನೆಯ ಕೇಂದ್ರ ಸಂಚಾಲಕರೊಬ್ಬರಾದ ಬರಗೂರು ರಾಮಚಂದ್ರಪ್ಪ ಹೇಳಿದರು.

ಸಮಾಜದಲ್ಲಿ ಯಾರು ಕಡೆಗಣಿಸಲ್ಪಟ್ಟಿದ್ದಾರೊ, ಯಾರು ಉಗ್ರವಾದ ಶೋಷಣೆಗೆ ಒಳಗಾಗಿದ್ದಾರೋ, ಯಾರು ಬಡವರೇ ಅವರಿಗೆ ಆತ್ಮವಿಶ್ವಾಸ ತಂದುಕೊಡುವ ಕೆಲಸವನ್ನು ಬಂಡಾಯ ಸಾಹಿತ್ಯ ಇಂದು ಮಾಡುತ್ತಿದೆ ಎಂದು ದಲಿತ ಕವಿ ಸಿದ್ದಲಿಂಗಯ್ಯ ಅವರು ಸಮ್ಮೇಳನದ "ಸಾಹಿತ್ಯ ಮತ್ತು ರಾಜಕೀಯ ಚಿಂತನ' ಎಂಬ ಮೊದಲನೆಯ ಗೋಷ್ಠಿಯನ್ನು ಉದ್ಘಾಟಿಸುತ್ತಾ ಹೇಳಿದರು. ಇದೇ ಗೋಷ್ಠಿಯಲ್ಲಿ 'ಸಾಹಿತ್ಯ ಮತ್ತು ಸ್ವಾಭಿಮಾನ ಚಳುವಳಿಗಳು' ಎಂಬ ವಿಷಯುವನ್ನು ಕುರಿತು ಶಿವಾಜಿ ಗಣೇಶನ್ ಅವರೂ "ಲೋಹಿಯಾ ಮತ್ತು ಸಾಹಿತ್ಯ" ಎಂಬ ವಿಚಾರವನ್ನು ಕುರಿತು ಸೋಮಶೇಖರ್ ಅವರು ಪ್ರಬಂಧ ಮಂಡಿಸಿದರು. 'ಭೌತಿಕ ವಿಚಾರವಾದಕ್ಕಾಗಿಯೇ ಮಾರ್ಕ್ಸ್‌ವಾದ ಅಲ್ಲ, ಮನುಷ್ಯನ ಬದುಕನ್ನು ಸುಂದರಗೊಳಿಸಲು ಇದು ಉಪಯೋಗವಾಗತಕ್ಕದ್ದು ಅದರಿಂದಲೇ ಮಾರ್ಕ್ಸ್‌ವಾದ ಎಂಬುದು ಒಂದು ಡೋಗ್ಮ ಅಲ್ಲ, ಅದು ಚಲನಶೀಲವಾದುದು ಎಂದು "ಸಾಹಿತ್ಯ ಮತ್ತು ಮಾರ್ಕ್ಸ್‌ವಾದ" ಎಂಬ ವಿಷಯ ಕುರಿತು ಬಂಡಾಯ ಕವಿ ರಮಜಾನದರ್ಗಾ ತಮ್ಮ ವಿಚಾರ ಮಂಡಿಸಿದರು. ಡಾ. ಬಿ, ಕೃಷ್ಣಮೂರ್ತಿ ಈ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು,

ಮನುಷ್ಯ ಆದಿಕಾಲದಲ್ಲಿ ತನಗೊದಗಿದ ಕಷ್ಟ ಕೋಟಲೆಗಳ ಕಾರಣವಾಗಿ ಪ್ರಕೃತಿ ಆರಾಧನೆ ಮಾಡುವಾಗ ಕಪಟವಿಲ್ಲದ ಭಕ್ತಿ ಮತ್ತು ಪ್ರೀತಿಯನ್ನು ವ್ಯಕ್ತಮಾಡಿರುವುದು ನಮಗೆ ತಿಳಿಯುವುದು, ಆದರೆ ಅದೇ ಇಂದು ಒಂದು ನಿರ್ದಿಷ್ಟ ಧರ್ಮದ ಪರಿಧಿಯೊಳಗೆ ಅನೇಕ ಹಿತಾಸಕ್ತಿಗಳ ಕಾರಣದಿಂದ ಅವೈಚಾರಿಕವಾಗಿ ಬೆಳೆಯಿತು ಎಂದು "ಭಕ್ತಿಪಂಥದ ಸ್ವರೂಪ" ಎಂಬ ಎರಡನೆಯ ಗೋಷ್ಠಿಯ ಆಶಯ ಭಾಷಣ ಮಾಡುತ್ತಾ ಅಲ್ಲಮಪ್ರಭು ಬೆಟ್ಟದೂರ ವ್ಯಾಖ್ಯಾನಿಸಿದರು. ಕೊನೆ ಕೊನೆಗೆ ಬಹು ಕೆಟ್ಟದಾಗಿ ಬೆಳೆಯತೊಡಗಿದ್ದ ವೀರಶೈವ ಚಳುವಳಿಯ ಅಂಶಗಳಿಂದ ಪ್ರೇರಿತವಾದ ದಾಸ ಸಾಹಿತ್ಯ ಕನ್ನಡದ ಪಲಾಯನವಾದಿ ಸಾಹಿತ್ಯವಾಯಿತೆಂದು "ಕನ್ನಡದಲ್ಲಿ ದಾಸಸಾಹಿತ್ಯದ ನೆಲೆ" ಎಂಬ ವಿಷಯದ ಬಗ್ಗೆ ವ್ಯಾಖ್ಯಾನಿಸುತ್ತಾ ಶಾಮಸುಂದರ ಬಿದರಕುಂದಿ ಹೇಳಿದರು. ಭಕ್ತಿ ಪಂಥದಲ್ಲಿ ಸಾಮಾಜಿಕ ಪ್ರಜ್ಞೆ" ಎಂಬ ವಿಷಯ ಕುರಿತು ವಿಚಾರ ಮಂಡಿಸಿದ ಡಾ. ಆರ್ವಿಯಸ್ ಸುಂದರಂ ವಿಚಾರವಾದವನ್ನು ಹೇಳುವುದು ಭಕ್ತಿಪಂಥದಲ್ಲಿ ಬಂದವರ ಗುರಿ ಅಲ್ಲದೇ ಇರಬಹುದು. ಆದರೆ ಇಂದು ಈ ಪಂಥ ನಮಗೆಷ್ಟು ಸೂಕ್ತ ಎಂದು ತಿಳಿಯುವಲ್ಲಿ ಸಾಮಾಜಿಕ ಪ್ರಜ್ಞೆ ನಿರೂಪಿಸುವುದರಲ್ಲಿ ಅವರು ಸೋತಿದ್ದಾರೆ, ಎಂದು ನಾವು ಭಾವಿಸಬೇಕಾಗಿದೆ ಎಂದು ವಾಖ್ಯಾನಿಸಿದರು. ಎಲ್ಲಾ ಧಾರ್ಮಿಕ ಪಂಥದ ಚಳುವಳಿಗಳೂ ಜ್ಞಾನಕರ್ಮದಿಂದ ಮನುಷ್ಯನನ್ನು ದೂರಮಾಡಿ ಭಕ್ತಿಯ ಕಪಟಮಾರ್ಗದತ್ತ ಅವನನ್ನು ಕೊಂಡೊಯ್ದುವು ಎಂದು "ಕರ್ನಾಟಕದದಲ್ಲಿ ಧಾರ್ಮಿಕ ಚಳುವಳಿಗಳು" ಎಂಬ ವಿಷಯದ ಬಗ್ಗೆ ಹಲವು ಹೊಳಹುಗಳೊಂದಿಗೆ ಮಾತಾಡಿದ ವಿಶ್ವನಾಥ ರೆಡ್ಡಿ ತಿಳಿಸಿದರು. ದೇವಯ್ಯ ಹರವೆ ಈ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು.

"ಭಾಷೆ ಮತ್ತು ಸಾಮಾಜಿಕ ಸಂಬಂಧ" ಎಂಬ ವಿಷಯ ಕುರಿತು ಮೂರನೆಯ ಗೋಷ್ಠಿಯನ್ನು ಡಾ. ವೇಣುಗೋಪಾಲ್ ಉದ್ಘಾಟಿಸಿದರು. ಈ ಗೋಷ್ಠಿಯ ಆಶಯ ಭಾಷಣ ಮಾಡುತ್ತಾ ಕಾಳೇಗೌಡ ನಾಗವಾರ ಅವರು "ಯಾರ ಮಾತೃಭಾಷೆಯೂ ಅಲ್ಲದ ಸಂಸ್ಕೃತದಲ್ಲಿ ಸುದ್ದಿಪ್ರಸಾರ ಮಾಡುವುದಾದರೆ, ಇಂಡಿಯಾದ ತುಂಬ ವ್ಯಾಪಕವಾಗಿ ಹಬ್ಬಿರುವ ಮುಸ್ಲಿಂ ಧರ್ಮೀಯರ ಮಾತೃಭಾಷೆಯಾದ ಉರ್ದುವಿನಲ್ಲೂ ಯಾಕೆ ಸುದ್ದಿಪ್ರಸಾರ ಮಾಡಬಾರದು" ಎಂದು ಅವರು ವಿವರಿಸುತ್ತಾ ಪ್ರಶ್ನಿಸಿದರು. ಭಾಷೆ ಶೋಷಣೆಯ ಮಾಧ್ಯಮವಷ್ಟೇ ಅಲ್ಲ ಅದು ಜಾತಿ ಮತ್ತು ವರ್ಗವನ್ನೂ ಸೂಚಿಸುವ ಮಾಧ್ಯಮವಾಗಿದೆ ಎಂದು "ಭಾಷೆ ಮತ್ತು ಸಾಮಾಜಿಕ ಆಶಯ" ಎಂಬ ವಿಷಯವಾಗಿ ಮಾತಾಡುತ್ತ, ಕಿಕ್ಕೇರಿ ನಾರಾಯಣರವರು ವಿವರಿಸಿದರು. ಕನ್ನಡ ಭಾಷೆಯನ್ನು ಕಲಿತ ಕನ್ನಡಿಗರ ಜೊತೆ ಮುಸ್ಲಿಮರು ಒಂದಾಗದಂತೆ ಎಫ್.ಎಂ, ಖಾನ್‌ನಂಥ ಸೈತಾನ್‌ಗಳು ತಮ್ಮ ರಾಜಕೀಯ ಕಾರಣಕ್ಕಾಗಿ ಅಡ್ಡ ಬರುತ್ತಿದ್ದಾರೆ ಎಂದು "ಪ್ರಜಾಸತ್ತಾತ್ಮಕ ಹೋರಾಟ ಮತ್ತು ಭಾಷೆ" ಎಂಬುವ ವಿಷಯವನ್ನು ಕುರಿತು ವಿವರಿಸುತ್ತ ರಂಜಾನ್ ದರ್ಗಾ ಹೇಳಿದರು. ಪತ್ರಿಕಾ ಕರ್ತ ಬಿ.ವಿ. ವೈಕುಂಠರಾಜು ಅವರು ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು.

"ಮಹಿಳೆ ಮತ್ತು ಸಾಹಿತ್ಯ" ಗೋಷ್ಠಿಯ ಉದ್ಘಾಟನೆ ಮಾಡಿದವರು ನಜಮಾ ಬಾಂಗಿ. 'ನೀವು ಬರೆಯುವವರು ನಾನು ಆಚರಿಸುವವಳು' ಎಂದು ಮಾತು ಶುರುಮಾಡಿದ ಆಕೆ ಇನ್ನು ಮುಂದೆಯಾದರೂ ಹೆಣ್ಣನ್ನು ಸೌಂದರ್ಯ ಸಾಧನವನ್ನಾಗಿ ನೋಡದೆ ಅವಳ ದುಃಖ ಸುಖ, ಅಂತರಂಗವನ್ನು ಅರಿತುಕೊಂಡು ಸೃಷ್ಟಿಯಾಗುವಸಾಹಿತ್ಯ ಬರಬಹುದೆಂದು ಆಶಿಸಿದರು. 'ಗಂಡಸು ಶಾಹಿಯ ಹಿಡಿತದಲ್ಲಿರುವ ಈ ಸಮಾಜದಲ್ಲಿ ಎಂದು ಒಬ್ಬ ಮುಸ್ಲಿಂ ಮಹಿಳೆ, ಒಬ್ಬ ದಲಿತ ಮಹಿಳೆ. ಬಡತನದ ಯಾತನೆಯನು ಅನುಭವಿಸಿದ ಒಬ್ಬ ಬಡ ಮಹಿಳೆ ಅತ್ಯುತ್ತಮವಾದ ಕಲಾಕೃತಿಯನ್ನು ಕೊಡುತ್ತಾರೆಯೋ ಅಂದು ಕನ್ನಡ ಸಾಹಿತ್ಯಕ್ಕೆ ಈ ನಾಡಿನ ಪೂರ್ಣ ಪ್ರಮಾಣದ ಪ್ರಾತಿನಿಧ್ಯ ದೊರಕುತ್ತದೆಂದು ನಾನು ಭಾವಿಸುತ್ತೇನೆ'. ಎಂದು ಸಾಹಿತ್ಯದಲ್ಲಿ ಮಹಿಳೆಯರ ಅರಿವಿನ ಸ್ಫೋಟ ಎಂಬ ವಿಷಯದ ಬಗ್ಗೆ ವ್ಯಾಖ್ಯಾನಿಸುತ್ತಾ ವಿಜಯಾದಬ್ಬೆ ತಿಳಿಸಿದರು.

ಆತ್ಮೀಯರು ಬಹಿರಂಗವಾಗಿ ಮುಟ್ಟಲು, ಆಲಂಗಿಸಲು ಸಂಕೋಚಪಡಬೇಕಾದ ಸ್ಥಿತಿ ಇರುವುದು ಈ ದೇಶದ ಅನಾರೋಗ್ಯ ಪೂರಿತವಾದ ವ್ಯವಸ್ಥೆಯ ಕುರುಹು ಎಂದು "ಇಂಡಿಯಾದ ಸಂಸ್ಕೃತಿಯಲ್ಲಿ ಸ್ತ್ರೀ" ಎಂಬ ವಿಷಯ ಕುರಿತು ಪ್ರಬಂಧ ಮಂಡಿಸುತ್ತ ಪಿ, ರಾಮಮೂರ್ತಿಯವರು ವಿವರಿಸಿದರು. ಬಿ.ಟಿ. ಲಲಿತಾ ನಾಯಕ ಅವರು ಆ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದರು. "ನಾವು ಪರಂಪರೆಯ ವಿರೋಧಿಗಳಲ್ಲ. ಪರಂಪರೆ ಎಂಬುದು ಸನಾತನವಾದ ಪ್ರತಿಗಾಮಿ ಅಂಶಗಳನ್ನು ಉಳಿಸಿಕೊಂಡು ಬರುವಂತಹುದಲ್ಲ. ಮರವೊಂದರಲ್ಲಿ ಹಳೆ ಎಲೆಗಳೆಲ್ಲಾ ಉದುರಿ ಹೊಸ ಎಲೆಗಳು ಚಿಗುರುವಂತಹ ಕ್ರಿಯೆಯಾಗಿರುತ್ತದೆ. ಆದರಿಂದ ಸಂಸ್ಕೃತಿ ನಿರಂತರವಾದ ಬಂಡಾಯ ಗುಣಗಳಿಂದ ಬೆಳೆಯುತ್ತಲೇ ಬಂದಿದೆ" ಎಂದು ಸಮ್ಮೇಳನವ ಸಮಾರೋಪ ಭಾಷಣ ಮಾಡುತ್ತ ಚಂದ್ರಶೇಖರ ಪಾಟೀಲ ವಿವರಿಸಿದರು.

# ನನ್ನ ಜೀವನದ ಕಥೆ

**ಎ.ಕೆ ಗೋಪಾಲನ್ ಅವರು ಕೇರಳದ ಕೆನ್ನಾನೂರ್ ಜಿಲ್ಲೆಯ ಮೊಝೈರಿ ಎಂಬ ಹಳ್ಳಿಯಲ್ಲಿ ೧-೧೦-೧೯೦೩ ರಂದು ಜನ್ಮ ತಾಳಿದರು. ತಂದೆ ರೈರು ನಂಬಿಯಾರ್, ತಾಯಿ ಮಾಧವಿ ಅಮ್ಮಾ. ಉತ್ತರ ಮಲಬಾರಿನಲ್ಲಿ ಜನಪ್ರಿಯ ಸಮಾಜ ಸುಧಾರಕರಾಗಿದ್ದ ತಂದೆಯ ದಾರಿಯನ್ನೇ ತುಳಿದು ತಾರುಣ್ಯದ ಹೊಸ್ತಿಲಲ್ಲೇ ಗೋಪಾಲನ್ ನವ ಜನಾಂಗದ ನಾಯಕರಾದರು.**

**ಈ ದೇಶದ ನಾಡಿ ಬಡಿತವನ್ನು ಚೆನ್ನಾಗಿ ಅರಿತಿದ್ದ ಕಮ್ಯುನಿಸ್ಟ್ ನಾಯಕ ಎ.ಕೆ.ಗೋಪಾಲನ್‌ರ ಜೀವನ ಚರಿತ್ರೆಯಿಂದ ಆಯ್ದ ಕೆಲವು ಭಾಗಗಳು ಇಲ್ಲಿವೆ.**

ನಾನು ಬುದ್ಧಿಜೀವಿಯಲ್ಲ. ಬುದ್ಧಿಜೀವಿಗಳಿಗೆ ನನ್ನ ಭಾಷಣವು ಅಷ್ಟೊಂದು ಹಿಡಿಸುವುದಿಲ್ಲ. ಅವುಗಳಲ್ಲಿ ರಾಜಕೀಯವಿಲ್ಲವೆಂದು ಅವರು ಹೇಳುತ್ತಾರೆ. ಒಂದು ರೀತಿಯಲ್ಲಿ ಇದು ನಿಜ. ಅವರು ಪುಸ್ತಕಗಳಲ್ಲಿ ಓದಿ ಮನಸ್ಸಿನಲ್ಲಿ ತುಂಬಿಕೊಂಡಿರುವ ಸಿದ್ಧಾಂತಗಳನ್ನು ನಾನು ಓದಿಲ್ಲ. ನಾನು ಅವುಗಳನ್ನು ಓದಿದರೂ ಅವನ್ನು ಜೀರ್ಣಿಸಿ ಕೊಳ್ಳುತ್ತೇನಲ್ಲದೆ ವಾಂತಿ ಮಾಡುವುದಿಲ್ಲ. ಅಂತೂ ಜನರು ನನ್ನ ಭಾಷಣಗಳನ್ನು ಮೆಚ್ಚುತ್ತಾರೆ. ಜನರ ಜೀವನ ಕ್ರಮವನ್ನೂ ಅವರ ಉಡುಗೆತೊಡುಗೆಗಳನ್ನೂ ಅವರ ವಸತಿ ಮತ್ತು ಪರಿಸರಗಳನ್ನೂ ನಾನು ಬಹಳ ಶ್ರದ್ಧೆಯಿಂದ ಅಭ್ಯಾಸಮಾಡಿದ್ದೇನೆ. ಅವರ ಸಮಸ್ಯೆಗಳನ್ನು ಅವರಿಗೆ ಅರ್ಥವಾಗುವ ಭಾಷೆಯಲ್ಲಿ ವಿವರಿಸುತ್ತೇನೆ. ನಾನು ಎಲ್ಲಿ ಭಾಷಣ ಮಾಡುವುದಿದ್ದರೂ, ಅಲ್ಲಿಯ ಜನರ ಜೀವನದ ಕುರಿತು ಮಾಹಿತಿ ಸಂಗ್ರಹಿಸುವುದು ನನ್ನ ಅಭ್ಯಾಸವಾಗಿತ್ತು. ಚಳುವಳಿಗೆ ಸಹಾಯ ಮಾಡುವವರನ್ನು ನಾನು ಪ್ರೋತ್ಸಾಹಿಸುತ್ತಿದ್ದೆ. ನನ್ನ ಭಾಷಣಗಳನ್ನು ಮನದಟ್ಟುಮಾಡಲು ನಾನು ಸಣ್ಣ ಘಟನೆಗಳನ್ನೂ ವಿವರಣೆಗಳನ್ನೂ ಸಂದರ್ಭೋಚಿತವಾಗಿ ಉಪಯೋಗಿಸುತ್ತಿದ್ದೆ.

೦ ೦ ೦

ದೇವಾಲಯದ ಆಡಳಿತದವರೂ ಸಿದ್ಧತೆ ನಡೆಸಿದರು. ದೇವಾಲಯದ ಸುತ್ತಲೂ ಮುಳ್ಳುಸರಿಗೆಗಳಿಂದ ಬೇಲಿ ಕಟ್ಟಿದರು. ಸತ್ಯಾಗ್ರಹಿಗಳ ಮೇಲೆ ಕಣ್ಣಿಡಲು ದೃಢಕಾಯರಾದ ಕಾವಲುಗಾರರನ್ನು ನೇಮಿಸಿದರು. ಸತ್ಯಾಗ್ರಹಿಗಳನ್ನು ಹೊಡೆದು ಕೊಲ್ಲಲಾಗುವುದೆಂಬ ಬೆದರಿಕೆಯನ್ನು ಹರಡಿಸಲಾಯಿತು. ದೇವಾಲಯವು ಸಾಮೂದಿರಿ ರಾಜನ ಒಡೆತನದಲ್ಲಿತ್ತು. ಸಂಪ್ರದಾಯವಾದಿಗಳು ಚಿದರಿಕೆ ಹುಟ್ಟಿಸುವ ಮನೋಭಾವ ವ್ಯಕ್ತಪಡಿಸಿದರು. ಅವರು ಕಲಿಯುಗದ ಆಳ್ವಿಕೆಯನ್ನು ಶಪಿಸಿದರು. ಸಾರ್ವಜನಿಕ ರಸ್ತೆಯಲ್ಲಿ ನಡೆಯಲಿಕ್ಕೂ ಹಕ್ಕಿಲ್ಲದ ಹರಿಜನರು ದೇವಾಲಯವನ್ನು ಪ್ರವೇಶಿಸುವುದು! ಅದೂ ಗುರುವಾಯೂರಪ್ಪನ ಸನ್ನಿಧಿಯಲ್ಲಿ! ಸನಾತನಿಗಳಿಗೆ ಇದಕ್ಕಿಂತಲೂ ದೊಡ್ಡ ಕಳಂಕವನ್ನು ಯೋಚಿಸಲೂ ಸಾಧ್ಯವಿರಲಿಲ್ಲ. ಇದು ಎಲ್ಲೆಡೆಗಳಲ್ಲೂ ಮಾತನಾಡುವ ವಿಷಯವಾಯಿತು. ಸ್ವಾತಂತ್ರ್ಯಪ್ರೇಮಿಗಳೂ ಖಾದಿಧಾರಿಗಳೂ ಆದ ಹಲವು ರಾಷ್ಟ್ರೀಯವಾದಿಗಳು ತಮ್ಮ ಸ್ವಂತ ಬಣ್ಣವನ್ನು ಬಯಲು ಮಾಡಿಕೊಂಡರು. ವಿದೇಶಿಯರ ಆಳ್ವಿಕೆಯಿಂದ ದಮನಕ್ಕೊಳಗಾದ ಜನಕೋಟಿಯನ್ನು ವಿಮೋಚನೆಗೊಳಿಸಲು ಶ್ರಮಿಸುತ್ತಿದ್ದ ಕೆಲವು ಮೇಲ್ಜಾತಿಯ ಹಿಂದುಗಳು, ಸ್ವತಃ ಕಾಂಗ್ರೆಸಿಗರೆಂದು ಅಭಿಮಾನ ಪಡುತ್ತಿದ್ದವರು, ತಮ್ಮ ಖಾದಿ ಬಟ್ಟೆಗಳನ್ನು ಹರಿದು ಬಿಸಾಡಿದರು; ಗಾಂಧೀಜಿಯ ಫೋಟೋಗಳನ್ನು ಒಡೆದುಹಾಕಿದರು. ಹರಿಜನರನ್ನು ದಮನಿಸಲಿಕ್ಕೂ ಹಿಂಸಿಸಲಿಕ್ಕೂ ಇದ್ದ ಅವಕಾಶವು ತಮ್ಮ ಜನ್ಮಸಿದ್ಧ ಹಕ್ಕೆಂದೂ, ಅದು ಶಾಶ್ವತವಾಗಿರಬೇಕೆಂದೂ ಅವರು ಬಯಸಿದರು. ಆದರೆ ವಿದೇಶಿಯರ ಆಳ್ವಿಕೆಯನ್ನು ಅವರು ವಿರೋಧಿಸುತ್ತಿದ್ದರು. ಒಂದೆಡೆ ಸ್ವಾತಂತ್ರ್ಯಕ್ಕಾಗಿ ಹೋರಾಟ. ಮತ್ತೊಂದೆಡೆ ಅದೇ ಹೋರಾಟವನ್ನು ಸದೆಬಡಿಯುವುದು. ಮೇಲ್ಜಾತಿ ಹಿಂದುಗಳ ಒಂದು ವಿಭಾಗವು ಕಾಂಗ್ರೆಸು ಧಾರ್ಮಿಕ ವಿಷಯಗಳಲ್ಲಿ ಕೈಹಾಕಿದರೆ ತಾವು ಕಾಂಗ್ರೆಸ್ಸಿನಲ್ಲಿ ಮುಂದುವರಿಯಲು ಇಚ್ಛಿಸುವುದಿಲ್ಲ ಪಣತೊಟ್ಟಿತು.

೦ ೦ ೦

ಕುಟುಂಬದೊಂದಿಗಿನ ಸಂಬಂಧವನ
ದುಕೊಳ್ಳುವುದೂ, ವಿವಾಹವಾಗದೆ
ವುದೂ ಓರ್ವ ಕ್ರಾಂತಿಕಾರಿಯ ಿದ ಸಿರಿ
ಡತಕ್ಕ ಗುಣಗಳೆಂದು ನನ್ನ ಭಾವನೆಯ
ಈ ಭಾವನೆ ತಪ್ಪೆಂದು ನಾನು ಆಮೇಲೆ
ಕ್ರಾಂತಿಕಾರಿಗಳ ಮುಂಚೂಣಿಯಲ್ಲಿ
ಬೇಕೆಂಬುದು ನನ್ನ ಬಯಕೆಯಾಗಿತ್ತು.
ಸನ್ನಿವೇಶಗಳ ಒತ್ತಡಕ್ಕೆ ಮಣಿದು
ಮದುವೆಯಾದೆ. ಮುಂದೆ ಕುಟುಂಬದ
ರಿಂದಲೂ ಪತ್ನಿಯಿಂದಲೂ ಬೇರ್ಪಟ್ಟ
ಕ್ರಾಂತಿಕಾರಿಯಾಗಲು ನಾನು ಶ್ರಮಿಸಿದೆ
ಕುಟುಂಬದ ಸದಸ್ಯರೊಂದಿಗೆ ಹೊಂ
ಮಾಡಿಕೊಳ್ಳಲಿಕ್ಕಾಗಲೀ ಅವರನ್ನು
ತಾತ್ವಿಕ ಧೋರಣೆಗಳ ಕಡೆಗೆ ಒಲಿಸಿಕ
ಕ್ಕಾಗಲೀ ನಾನು ಪ್ರಯತ್ನಿಸಲಿಲ್ಲ.
ನಾನೊಬ್ಬ ವಿಚಿತ್ರ ಜೀವಿಯಾಗಿದ್ದೆ.
ಜೈಲಿಗೆ ಹೋಗಿದ್ದೇನೆ; ಜನತೆಯ
ರಾಷ್ಟ್ರೀಯ ಭಾವನೆಯನ್ನು ಹರಡಿ
ಸತ್ಯಾಗ್ರಹ ಚಳುವಳಿಗಳಲ್ಲಿ ಭಾಗವಹಿಸಿ
ನಾಡಿನಾದ್ಯಂತ ಸಂಪ್ರದಾಯವಾದದ
ಜಾಗೃತಿಯನ್ನು ಸೃಷ್ಟಿಸಿದ್ದೇನೆ. ಆದ
ಅತ್ಯಂತ ಸಮೀಪದವರಾದ ಪತ್ನಿ
ಕುಟುಂಬದ ಸದಸ್ಯರಲ್ಲಿ ಆ ಭಾವನೆ
ಹುಟ್ಟಿಸುವುದರಲ್ಲಿ ನಾನು ವಿಫಲನಾದೆ.
ಮೊದಲ ಕರ್ತವ್ಯವು ಅದಾಗಿತ್ತೆಂಬ
ನಾನು ತಿಳಿದುಕೊಳ್ಳಲಿಲ್ಲ. ನಾನು ಅ
ಶ್ರಮವಹಿಸಲಿಲ್ಲ. ಸ್ವಂತ ಕುಟುಂ
ಸುಧಾರಣೆ ಮಾಡದೆ ದೇಶದ ಸು
ಮಾಡಲು ಹೊರಡುವುದು ಮೂಖ
ದೂ, ಅದು ದೇಶದ ಸುಧಾರಣೆ ಕ
ಕಾರ್ಯದ ಒಂದು ಅಂಗವಾಗಿದೆ
ನಾನು ಮನಗಾಣಲಿಲ್ಲ. ಈ ದೊಡ್ಡ
ಪ್ರತಿಫಲವನ್ನು ನಾನು ಹಲವು ವ
ಅನುಭವಿಸುತ್ತಿದ್ದೇನೆ. ಇದು ನನ
ಪಾಠ ಕಲಿಸಿತು.

ದೇವಾಲಯ ಪ್ರವೇಶ ಸತ್ಯಾಗ್ರಹ
ತಂದೆಯವರ ಮತ್ತು ನನ್ನ ಕುಟುಂಬ
ಸದಸ್ಯರ ವಿರೋಧವು ಪರಾಕಾಷ್ಠೆ
ನನ್ನ ಪತ್ನಿಯು ಮನೆಯಲ್ಲಿ ನಿಂ
ಸಹಿಸಬೇಕಾಯಿತು. ನಾನಿಲ್ಲದೆ ಅ
ಕಳೆಯುವುದು ಅವಳಿಗೆ ಕಷ್ಟವಾಯಿತು.
ನನ್ನೊಂದಿಗೆ ಇರಬಯಸಿದಳು.
ನನ್ನೊಂದಿಗೆ ಬರಬಯಸಿದ್ದ ನನ್ನ

ಪ್ರೀತಿಯಿಂದಲೋ, ದೇಶಪ್ರೇಮದಿಂದಲೋ ಎಂಬುದನ್ನು ಖಚಿತವಾಗಿ ಹೇಳಲಾರೆ. ನನ್ನೊಂದಿಗೆ ಜೀವಿಸುವುದರಿಂದಾಗುವ ಕಷ್ಟಗಳನ್ನು ನಾನವಳಿಗೆ ವಿವರಿಸಿದೆ. ತಾನು ಅದೆಲ್ಲವನ್ನೂ ಸಹಿಸಲು ಸಿದ್ಧಳಿರುವುದಾಗಿ ಅವಳು ವಾಗ್ದಾನ ಮಾಡಿದಳು. ನನಗೆ ಸಮಾಧಾನವಾಯಿತು. ಅವಳಿಗೆ ಶಿಕ್ಷಣ ಕೊಡಬೇಕೆಂದು ನನಗೆ ತೋರಿತು. ನಾನು ಅವಳನ್ನು ಕೇಳಪ್ಪನವರ ಹರಿಜನಾಶ್ರಮವಾದ ಪಾಕನಾರ್ ಪುರಕ್ಕೆ ಕರಕೊಂಡು ಹೋಗಿ ಅಲ್ಲಿ ಅವಳು ವಾಸಿಸುವ ವ್ಯವಸ್ಥೆ ಮಾಡಿದೆ. ಎರಡು ದಿನ ಅಲ್ಲಿದ್ದು ನಾನು ಕಲ್ಲಿಕೋಟೆಗೆ ಹೊರಟೆ. ನಾನಿಲ್ಲದ ಈ ಅವಕಾಶವನ್ನು ಉಪಯೋಗಿಸಿ ಅವಳ ಸೋದರಮಾವ ಆಶ್ರಮಕ್ಕೆ ಬಂದು, ಅವಳ ತಂದೆ ತೀರಿಹೋದರೆಂದು ಸುಳ್ಳುಹೇಳಿ ಅವಳನ್ನು ಕರಕೊಂಡು ಹೋದರು. ಮನೆಯಲ್ಲಿ ಅವಳನ್ನು ಬಂಧನದಲ್ಲಿಟ್ಟರು. ಈ ವಿಷಯ ತಿಳಿದೊಡನೆ ನಾನು ಅವಳ ಮನೆಗೆ ಹೋಗಿ ನನ್ನ ತಪ್ಪಿಗೆ ಕ್ಷಮೆ ಕೇಳ ಬಯಸಿದೆ. ರಾಜಕೀಯವಾಗಿ ಸಾಕಷ್ಟು ತಿಳುವಳಿಕೆ ಇಲ್ಲದ ನನ್ನ ಪತ್ನಿಯೊಡನೆ ವಿವರವಾಗಿ ಮಾತನಾಡಿ ಅವಳನ್ನು ಸಮಾಧಾನಪಡಿಸಬಲ್ಲೆನೆಂದು ನಾನೆಣಿಸಿದ್ದೆ. ಆದರೆ ನಾನು ಸೋತೆ. ಅವಳು ನನ್ನೊಡನೆ ಮಾತನಾಡಲಿಲ್ಲ. ಅವಳನ್ನು ನೋಡಲಿಕ್ಕೂ ನನಗೆ ಸಾಧ್ಯವಾಗಲಿಲ್ಲ. ಅವಳು ನನ್ನನ್ನು ಪ್ರೀತಿಸುತ್ತಿದ್ದಳೆಂಬುದನ್ನು ನಾನು ಬಲ್ಲೆ. ಆದರೆ ಸಂಪ್ರದಾಯಗಳನ್ನು ಮುರಿದು ನನ್ನೊಂದಿಗೆ ಹೊರಟು ಬರುವ ಧೈರ್ಯ ಅವಳಿಗಿರಲಿಲ್ಲ. ಆ ತಪ್ಪು ನನ್ನದು. ಅವಳದ್ದಲ್ಲ. ಅದು ಕ್ರಾಂತಿಕಾರಿ ಪಥದಲ್ಲಿ ನನಗಿದ್ದ ಕೆಲವು ತಪ್ಪು ತಿಳುವಳಿಕೆಗಳ ಫಲವಾಗಿತ್ತು. ನಾಲ್ಕೈದು ವರ್ಷಗಳ ಕಾಲ ಅವಳು ಪುನರ್ವಿವಾಹವಾಗಲಿಲ್ಲ. ಅನಂತರ ಅವಳು ವಿವಾಹವಾದಳು. ನನಗೆ ಅದರಿಂದ ಸಂತೋಷವಾಗಿದೆ. ಅಂತೂ ಅವಳೂ ನನ್ನನ್ನು ತೊರೆದಳು. ಜೀವನದ ಸುಖ ದುಃಖಗಳನ್ನು ಹಂಚಿಕೊಂಡು ಒಟ್ಟಿಗೆ ಕೆಲಸ ಮಾಡಲು ಸಿದ್ಧಳಾಗಿದ್ದ ಒಬ್ಬಳು ಸಂಗಾತಿ—ಆ ರೀತಿಯ ಏಕಮಾತ್ರ ಸಂಗಾತಿ—ಅವಳೂ ನನ್ನನ್ನು ಬಿಟ್ಟು ಹೋದಳು! ಯಾಕೆ? ಸ್ವಲ್ಪ ಯೋಚಿಸಿದರೆ ನಿಮಗೆ ಅದರ ಉತ್ತರ ಸಿಕ್ಕೀತು. ನಾನೊರ್ವ ರಾಜಕೀಯ ಕಾರ್ಯಕರ್ತ. ಕಷ್ಟಕಾರ್ಪಣ್ಯಗಳನ್ನು ಅನುಭವಿಸಿದವನು. ನನ್ನ ಹಲವಾರು ಸಂಬಂಧಿಕರು ಸರಕಾರದಲ್ಲಿ ದೊಡ್ಡ ಅಧಿಕಾರಿಗಳಾಗಿದ್ದರು. ಕೆಳಜಾತಿಯ ಮತ್ತು ಹರಿಜನ ಜವಾನರು ಅವರ ಮನೆಗಳೊಳಗೆ ಹೋಗಿ ಕೆಲಸ ಮಾಡುತ್ತಿದ್ದರು. ಅಂತೂ ಅವರ ವಿಷಯದಲ್ಲಿ ಏನೂ ಹೇಳುತ್ತಿರಲಿಲ್ಲ. ಅಸ್ಪೃಶ್ಯತೆಯ

## ನನ್ನ ಜೀವನದ ಕಥೆ

ಪ್ರಶ್ನೆಯನ್ನು ನಿಶ್ಶಬ್ದಗೊಳಿಸುವ ಶಕ್ತಿ ಬೆಳ್ಳಿಯ ನಾಣ್ಯಗಳಿಗಿತ್ತು. ಸಂಪ್ರದಾಯವಾದಿಗಳ ಬಾಯಿ ಮುಚ್ಚಿಸಲು ಪವನುಗಳನ್ನು ಎಸೆದು ಬಿಟ್ಟರೆ ಸಾಕು, ಅಷ್ಟು ಹಣ ಅವರಲ್ಲಿತ್ತು.

೦ ೦ ೦

ನಾನು ಬಳ್ಳಾರಿ ಜೈಲಿಗೆ ತಲುಪಿದ ನಿಮಿಷದಿಂದ ಮೊದಲ್ಗೊಂಡು ಜೈಲಧಿಕಾರಿಗಳು ನನ್ನೊಂದಿಗೆ ಅಮಾನುಷವಾಗಿ ವರ್ತಿಸತೊಡಗಿದರು. ನನಗೆ ಬೀಸುವ ಕಲ್ಲನ್ನು ತಿರುಗಿಸುವ ಕೆಲಸ ಕೊಡಲಾಯಿತು. ನನ್ನಿಂದ ಅದು ಸಾಧ್ಯವಾಗಲಿಲ್ಲ. ಅದಕ್ಕಾಗಿ ನನ್ನನ್ನು ಶಿಕ್ಷಿಸಿ ಸರಪಳಿ ತೊಡಿಸಲಾಯಿತು. ಎರಡು ಕಾಲುಗಳಿಗೂ ಒಂದಿಂಚು ಗಾತ್ರದ ಕಬ್ಬಿಣಡ ಬಳೆಗಳು, ಅವುಗಳಿಗೆ ನೇತಾಡಿಸಿದ ಇಪ್ಪತ್ತು ಪೌಂಡು ಭಾರದ ಕಬ್ಬಿಣದ ಗುಂಡುಗಳು ಬೇರೊಂದು ಬಳೆಗೆ ಸಿಕ್ಕಿಸಲ್ಪಟ್ಟಿದ್ದುವು. ನಿದ್ರಿಸುವಾಗಲೂ ಇವು ನನ್ನ ದೇಹದಲ್ಲಿರುತ್ತಿದ್ದವು. ಇದರ ಹೆಸರೇ ಕೋಲುಸಂಕಲೆ. ಕೆಲವು ದಿನಗಳವರೆಗೆ ನನಗೆ ಇದನ್ನು ಅನುಭವಿಸುವುದು ಕಷ್ಟವಾದರೂ ಆಮೇಲೆ ಅದು ನನಗೊಂದು ವಿನೋದವಾಯಿತು. ಒಂದು ತಿಂಗಳನಂತರ ನನ್ನನ್ನು ಹಿಟ್ಟು ಮಾಡುವ ಕೆಲಸಕ್ಕೆ ನೇಮಿಸಿದರು. ಒಂದು ವಾರ ಆ ಕೆಲಸ ಮಾಡಿ ನಾನು ಕಂಗಾಲಾದೆ. ಕೊನೆಗೆ ಅವರು ನನ್ನನ್ನು ಹಗಲಿರುಳೂ ಏಕಾಂತ ಬಂಧನದಲ್ಲಿಟ್ಟರು.

"ಗುಲಾಮರು ನಾವಲ್ಲ, ತಲೆಬಾಗೆವು
ಇನ್ನೆಂದೂ
ಪಾದವನೂರಿ ನಿಂತು ಹೋರಾಡುವೆವು
ನಾವು
ಹಗಲಿರುಳೂ ಮಿಲ್ಲಿನಲಿ ದುಡಿಯಲು
ಬೇಕು ನಾವು
ಹಣ ಸಂಪಾದನೆಗೋ—ಮಾಲಕರು
ಹೊಲದ ಕೆಸರಲಿ ಇಳಿಯಲು ಬೇಕು ನಾವು
ಹೊಟ್ಟೆ ತುಂಬಲೋ—ಪಾಳೆಯಗಾರರು
ಉಡಲು ಬಟ್ಟೆಯಿಲ್ಲ ಒರಗಲು ನೆಲವಿಲ್ಲ
ಕುಡಿಯಲು ಗಂಜಿಯಿಲ್ಲ, ಇದೆಂಥಾ
ಅನ್ಯಾಯ ?
ಮನುಷ್ಯರಲ್ಲವೆ ನಾವು ?
ಈ ನೆಲವಲ್ಲಿ ಬದುಕಬೇಕು ನಾವು
ನರಳಲು ಮಾತ್ರವೆ ಹುಟ್ಟಿದವರಲ್ಲ ನಾವು
ಅಧಿಕಾರವೇ ನಿನ್ನ ಬಣ್ಣವನ್ನಿದೋ
ಸರಿಯಾಗಿ ಕೇಡೆವು ನಾವು
ಮರಣದಲಿ ಭಯವಿಲ್ಲ ನಮಗಿನ್ನೆಂದೂ"

[ನನ್ನ ಜೀವನದ ಕಥೆಯಲ್ಲಿರುವ ಪ್ರೇಂಜಯರ ಪದ್ಯ]

ಕೊಳಕು ಆಹಾರ, ಏಕಾಂತ ಬಂಧನ—ಇವೆರಡರಿಂದ ನಾನು ತುಂಬ ಯಾತನೆಗೊಳಗಾದೆ. ನನ್ನ ದೇಹದ ತೂಕ ಕಡಿಮೆಯಾಯಿತು. ಕೊನೆಗೆ ನಾನು ಉಪವಾಸ ಸತ್ಯಾಗ್ರಹ ಮಾಡಲು ತೀರ್ಮಾನಿಸಿದೆ. ಉಪವಾಸ ಪ್ರಾರಂಭವಾಯಿತು. ತುಂಬ ದುರ್ಬಲನಾಗಿದ್ದುದರಿಂದ ಈ ಸಲ ಉಪವಾಸವ್ರತವು ಅಷ್ಟೊಂದು ಸುಲಭವಾಗಿರಲಿಲ್ಲ. ಏಳನೇ ದಿವಸ ಅವರು ಮೂಗಿನ ಮೂಲಕ ಆಹಾರ ಕೊಡಲು ಪ್ರಯತ್ನಿಸಿದರು. ನಾನು ಪ್ರತಿಭಟಿಸಿದೆ. ಸುಮಾರು ಇಪ್ಪತ್ತು ಜನರು ನನ್ನನ್ನು ನೆಲಕ್ಕೆ ಒತ್ತಿಹಿಡಿದು ಮೂಗಿನ ಮೂಲಕ ಹಾಲು ಕುಡಿಸಿದರು. ಹತ್ತನೇ ದಿನ ನನಗೆ ವಿಪರೀತ ಜ್ವರ ಬಂತು. ಪ್ರಜ್ಞೆ ತಪ್ಪಿತು. ಅವರು ನನ್ನನ್ನು ಆಸ್ಪತ್ರೆಗೆ ಸೇರಿಸಿದರು. ನನಗೆ ಔಷಧಿಯನ್ನೂ ಹಾಲನ್ನೂ ಕುಡಿಸಿದರು. ನಿರಾಹಾರ ವ್ರತದ ನಂತರ ನನ್ನನ್ನು 'ಬಿ'ಕ್ಲಾಸ್ ಕೈದಿಯಾಗಿ ವೆಲ್ಲೂರಿಗೆ ವರ್ಗಾಯಿಸಿದರು.

೦ ೦ ೦

ಗುರುವಾಯೂರು ಸತ್ಯಾಗ್ರಹ ಒಂದು ದೊಡ್ಡ ಸಾಧನೆಯಾಗಿತ್ತು. ದೇವಾಲಯ ಪ್ರವೇಶ ಮತ್ತು ಸಂಚಾರ ಸ್ವಾತಂತ್ರ್ಯದಂತಹ ಮೂಲಭೂತ ಉದ್ದೇಶಗಳನ್ನು ಗಳಿಸುವ ಹೋರಾಟವನ್ನು ಅದು ಬಲಪಡಿಸಿತ್ತು. ಆದರೆ ದೇವಾಲಯ ಪ್ರವೇಶವನ್ನು ಎಲ್ಲರೂ ಒಂದು ಜಾತಿಸಮಸ್ಯೆಯಾಗಿ ಮಾತ್ರ ಪರಿಗಣಿಸಿದ್ದರು. ಹರಿಜನರು ಬಡವರಾಗಿದ್ದರು. ದುಡಿಯುವ ದೇಹವಲ್ಲದೆ, ಅವರದೆಂಬುದು ಬೇರೇನೂ ಇರಲಿಲ್ಲ. ಒಂದಂಗುಲ ಭೂಮಿಯಾಗಲೀ ಉಳಕೊಳ್ಳಲು ಒಂದು ಗುಡಿಸಲಾಗಲೀ ಅವರಿಗಿರಲಿಲ್ಲ. ಇತರರು ವಾಸಿಸುವಲ್ಲಿ ಅವರು ವಾಸಿಸುವಂತಿರಲಿಲ್ಲ. ಅವರು ತಮ್ಮ ಜೀವನಕ್ಕಾಗಿ ಯಾವಾಗಲೂ ಇತರರನ್ನು ಆಶ್ರಯಿಸಬೇಕಾಗಿತ್ತು. ತಮ್ಮನ್ನು ತಾವು ಸಂರಕ್ಷಿಸಿಕೊಳ್ಳಲು ಅವರಿಗೆ ಯಾವ ದಾರಿಯೂ ಇರಲಿಲ್ಲ. ಅವರು ಮುಟ್ಟಿದ್ದನ್ನು ಇತರರು ಮುಟ್ಟುತ್ತಿರಲಿಲ್ಲ.

ಅವರು ಪ್ರಗತಿಹೊಂದಲು ಅವಕಾಶ ಮಾಡಿಕೊಡಬೇಕು. ಅವರಿಗೆ ವಸತಿಗಳೂ ಕೃಷಿಯೋಗ್ಯವಾದ ಭೂಮಿಯೂ ಸಿಗಬೇಕು. ಆಗ ಮಾತ್ರ ಇಂದಿನ ಅಸಮಾನತೆಗಳು ನಿವಾರಣೆಯಾದಾವು. ಬೇರೆಯವರ ಮಣ್ಣಿನಲ್ಲಿ ವಾಸಿಸುವಷ್ಟು ಕಾಲ, ಬೇರೆಯವರ ಅಡಿಯಾಳುಗಳಾಗಿರುವಷ್ಟು ಕಾಲ, ಆರ್ಥಿಕವಾಗಿ ಇತರರನ್ನು ಆಶ್ರಯಿಸಿರುವಷ್ಟು ಕಾಲ ಅವರ ಪರಿಸ್ಥಿತಿಯು ಸುಧಾರಿಸಲಾರದು. ಅಸ್ಪೃಶ್ಯತೆಯ ಆರ್ಥಿಕ ಬೇರುಗಳನ್ನು ಕಡಿದೊಗೆಯಬೇಕು. ಅದಕ್ಕೋಸ್ಕರ ಅವರಿಗೆ ಸ್ವಂತ ಮನೆಗಳೂ, ಒಳ್ಳೆಯ ವಿದ್ಯಾಭ್ಯಾಸವೂ, ಸರಕಾರಿ ನೌಕರಿಗಳಿಗೆ ಪ್ರವೇಶವೂ ಸಿಗಬೇಕು. =

# ತಂತಿ ಬೇಲಿಯ ಒಳ ಹೊರಗೆ: ಅಂಟಿದ ನಂಟು

**ಸಂಜನಹಳ್ಳಿ ನಾರಾಯಣ**

ನಂಜನಗೂಡು ಪ್ರಸಿದ್ಧ ಯಾತ್ರಾ ಸ್ಥಳವೆಂದು ಹೆಸರು ಪಡೆದಿದೆ. ಪ್ರತಿವರ್ಷವೂ ಎರಡು ದೊಡ್ಡ ಜಾತ್ರೆಗಳು ಇಲ್ಲಿ ನಡೆಯುತ್ತವೆ. ಹುಣ್ಣಿಮೆಯ ದಿನಗಳಲ್ಲಿ ಭಕ್ತಾದಿಗಳು ಸಾವಿರಗಟ್ಟಲೆ ಬರುತ್ತಾರೆ. ಜನಗಳು ಅನೇಕ ರೀತಿಯ ಹರಕೆ ಕೊಡುವ ವಿಧಾನಗಳಲ್ಲಿ ಶ್ರೀಕಂಠಸ್ವಾಮಿಗೆ ಮುಡಿ ಕೊಡುವ ಹರಕೆಯು ಪ್ರಧಾನವಾಗಿದೆ. ನಮ್ಮೂರ ಸಂಬಂಧಿಕರೊಬ್ಬರು ತಮ್ಮ ಮಗುವಿಗೆ ಮುಡಿ ಕೊಡಿಸಲು ದೇವಸ್ಥಾನಕ್ಕೆ ಹೊರಟಿದ್ದರು. ಅವರ ಜೊತೆ ನಾನು ಸಹ ಸುಮ್ಮನೆ ಹೊರಟೆ. ದೇವರು ಇರುವನೊ ಅಥವಾ ಇಲ್ಲವೊ ಯಾವುದೂ ನನಗೆ ಆಶ್ಚರ್ಯವಾಗಲಿಲ್ಲ. ಆದರೆ ದೇವಸ್ಥಾನದ ಸುತ್ತಾ ನಡೆಯುವ ವ್ಯವಹಾರಗಳ ಬಗ್ಗೆ ನನಗೆ ಆಶ್ಚರ್ಯವಾಯಿತು. ನಾನು ಕಂಡಂತಹ ಒಂದು ಪದ್ಧತಿಯನ್ನು ಹೇಳಬಯಸುತ್ತೇನೆ. ದೇವಸ್ಥಾನದ ಪಕ್ಕದಲ್ಲಿ ಕಪಿಲಾ ನದಿ ಹರಿಯುತ್ತಿದೆ. ಅದರ ದಂಡೆಯ ಮೇಲೆ ಒಂದು ಮರದ ತೋಪಿದೆ. ಅಲ್ಲಿ ಹಜಾಮರು ಹಜಾರವೊಂದನ್ನು ಮಾಡಿಕೊಂಡಿದ್ದಾರೆ. ಸುತ್ತಲೂ ತಂತಿಬಲೆಯನ್ನು ಹಾಕಿಕೊಂಡಿರುವರು. ಮುಡಿ ಕೊಡುವವರು 3ರೂಗಳನ್ನು ತೆತ್ತು ತಲೆ ಬೋಳಿಸಿಕೊಂಡು ಈ ತಂತಿ ಬಲೆಯಿಂದ ಹೊರಬರಬೇಕು.

ಈ ಹಜಾರಕ್ಕೆ ತುಸುದೂರದಲ್ಲಿ ಒಂದು ದೊಡ್ಡ ಮರವಿದೆ. ಅದರ ಕೆಳಗಡೆ ಒಬ್ಬ ಕ್ಷೌರಿಕನಿದ್ದ. ನನಗೆ ಅವನನ್ನು ಕಂಡು ಕುತೂಹಲವುಂಟಾಗಿ ಅವನ ಹತ್ತಿರ ಹೋದೆ. ಆತನು
ನನ್ನ ಕಂಡು "ಮುಡಿ ಕೊಡಿಸ ಬೇಕೆ ಸ್ವಾಮಿ
ಎಂದು ಕೇಳಿದ. "ಹೌದು" ಎಂದೆ ನಾ
"ಹಾಗಾದರೆ ಅಲ್ಲಿಗೆ ಹೋಗಿ" ಎಂ
ತಂತಿ ಬೇಲಿಯ ಕಡೆ ಕೈಮಾಡಿ ತೋರಿಸಿ
"ಯಾಕೆ ನೀವು ಮುಡಿ ತೆಗೆಯದಿಲ್ಲ
ಎಂದು ಕೇಳಿದೆ. "ನಾನು ಹರಿಜನರಿಗೆ, ನ
ಕೈವಾಡ್ದ ಜನರಿಗೆ" ಎಂದು ಹುಸಿನಗೆಯಾಡಿ
"ಓ... ಹಾಗೇನಾ ವಿಷಯ ಅವರು ನಿ
ನ್ನು ಒಳಗಡೆ ಅಲ್ಲಿಗೆ ಸೇರಿಸುವುದಿಲ್ಲವೆ" ಎಂ
ಮರು ಪ್ರಶ್ನೆ ಹಾಕಿದೆ. "ಹಾಗೇನಿಲ್ಲ ಸ್ವಾಮಿ
ಅವರು ಕರೆತಾರೆ, ನಾನೇ ಹೋಗಲ್ಲ —
ನಮ್ಮ ಜಾತಿ ಜನ ಗೊತ್ತಿರೋರು
ದಂತ ಸುತ್ತಾ ಹಳ್ಳಿಗಳಿಂದ ನನ್ನಲ್ಲಿಗೆ ಬರ್ತಾ
ಇದು ನಮ್ಮ ತಾತ ಮುತ್ತಾತರ ಕಾಲದಿ
ದಲೂ ಹೀಗೇನೆ ನಡ್ಕೊಂಡು ಬಂದಿದೆ. ಇನ
ನಾನೇಕೆ ಅವರ ಸಮ ಹೋಗಿ ಕುತ್ಕೊಳ್ಳೊ
ದು ಅಂತ ಇಲ್ಲೇ ಕುಂತೀನಿ. ಅವರ ಗುಂಪಿ
ಸೇರ್ಕೊಂಡರೆ ಇಲ್ಲಿ ಸಿಗುವಷ್ಟು ಸಂಪಾದ
ಅಲ್ಲಿ ಸಿಗೊಲ್ಲ. ಯಾಕೆಂದರೆ ಅಲ್ಲಿ ಒಬ್ಬ
ಇಷ್ಟಬಂದಷ್ಟು ಸಂಪಾದನೆ ಮಾಡೋ ಹಾಗಿಲ್ಲ
ಟಿಕೆಟ್ ಸಿಸ್ಟಂ ಇರತ್ತೆ. ಅದನ್ನು ಕೊಟ್ಟವರಿ
ನಾವು ಮುಡಿ ತೆಗೆಯಬೇಕು. ಒಟ್ಟು ಬಂ
ಹಣವನ್ನು ಎಲ್ಲರಿಗೂ ಸಮನಾಗಿ ಹಂಚಲಾಗು
ತ್ತದೆ ಎಂದು ಲಾಭ ನಷ್ಟದ ಲೆಕ್ಕ ತೋರಿಸಿದ
ನೀವು ಇಲ್ಲಿರುವುದರಿಂದ ಯಾವು ದೆ
ಟಿಕೆಟ್ ಸಿಸ್ಟಂ ಅಥವಾ ಸುಂಕ ಇತ್ಯಾದಿ
ತೊಂದರೆ ಇಲ್ಲವೆ? ಎಂದು ಕೇಳಿದೆ.
"ಏನು ತೊಂದರೆ ಕೊಟ್ಟಿಲ್ಲ, ನಿನ್ನ ಇಷ್ಟ
ಬಂದಷ್ಟು ಮಾಡಿಕೊ ಎಂದು ಬಿಟ್ಟು
ಬಿಟ್ಟಿದ್ದಾರೆ... ಎಂದನು.

ಹರಿಜನರು ಎಷ್ಟೋ ಅವರಲ್ಲಿಗೆ ಹೋ
ಗ್ತಾರೆ. ಯಾವುದೇ ಜಾತಿಗೀತಿ ಏನು ಕೇಳ್ತಾನ
ಇಲ್ಲವಲ್ಲ! ಎಂದು ನಾನು ಮತ್ತೆ ಕೇಳಿದೆ.
"ಈಗ ಅದ್ಯಾರ್ ಕೇಳ್ತಾರೆ ಸ್ವಾಮಿ
ಎಲ್ಲಾ ಬೆರಕೆ ಜೀವನ. ನಾನು ನನ್ನಪ್ಪನ
ಕಸುಬು ಯಾಕೆ ಬದಲಾಯಿಸದು ಅಂತ ಇಲ್ಲಿ
ಈ ಮರಕ್ಕೆ ಅಂಟುಕೊಂಡಿದ್ದೇನೆ" ಎಂದು
ಹೇಳಿದ.

ಈ ಕೂಲಿ ಸಂಪಾದನೆ ವ್ಯವಸ್ಥೆಯ ಒಳಗಡ
ಜಾತಿ ಸೂಕ್ಷ್ಮತೆಯ ಕಂಡು ಬೆರಗಾದೆ. ಅವನ
ಮೇಲುವರ್ಗದ ಜನ ಕರೆದರು ಹೋಗುವುದಕ್ಕೆ
ಭಯವೋ, ಅಥವಾ ತನ್ನ ಜಾತಿ ಜನ ಕಾಯಂ
ಆಗಿ ಇವನ ಹತ್ತಿರ ಬರುವುದರಿಂದ ಸಂಪಾದನೆ
ಜಾಸ್ತಿಮಾಡುವುದು ನಿಜವೊ ಸುಳ್ಳೋ ಏನೂ
ತಿಳಿಯದೆ ಸುಮ್ಮನೆ ಮನೆಗೆ ಬಂದೆ.

## ಅನುಭವದ ಗಣಿಯಿಂದ

### ನನ್ ಜೊತೆ ಜಂಗಳ್ಕೆ ಸಾ

ಚಾಮರಾಜನಗರ ಪ್ರಾಥಮಿಕ ಶಾಲೆಗೆ ಆಗ ತಾನೇ ಹೊಸದಾಗಿ ಬಂದಿದ್ದ ಐಯ್ಯಂಗಾರ್‌ರೊಬ್ಬರು ಮುಖ್ಯೋಪಾಧ್ಯಾಯರಾಗಿದ್ದರು. ಮೇಲುಕೋಟೆಯವರಾದ ಇವರು ಶರಟು, ಕೋಟು, ಕಚ್ಚೆ, ಪಂಚೆಗಳಿಂದ ಅಲಂಕರಿಸುತ್ತಿದ್ದರು. ಹಣೆಯಮೇಲೆ ಬರೆಹಾಕಿದಾಗೆ ಎಳೆದ ಲಕಲಕಿಸುವ ಮೂರು ನಾಮಗಳು ಮೆರೆಯುತ್ತಿದ್ದುದರಿಂದ ಅವರನ್ನು ಯಾರು ಬೇಕಾದರೂ ಸುಲಭದಲ್ಲಿ ಮೇಲುಕೋಟೆಯ ಆಸಾಮಿಯೆಂದು ಗುರುತಿಸಬಹುದಿತ್ತು. ಈ ಮೇಲುಕೋಟೆ ಕೆಂಪುಮೂತಿ ಬ್ರಾಹ್ಮಣರು ಲಿಂಗಾಯತರ ಹುಡುಗರನ್ನು ಒಂದು ಕಡೆ ಕುಳ್ಳಿರಿಸಿ ಉಳಿದ ಶೂದ್ರರನ್ನು ಮತ್ತೊಂದು ಕಡೆ ಕುಳ್ಳಿರಿಸಿ ದಲಿತರನ್ನು ಕೊನೆಬೆಂಚಿಗೆ ಅಟ್ಟುವ ಸೌಜನ್ಯ ತೋರಿದ್ದರು. ಪ್ರಶ್ನೆಯನ್ನು ಸರಿಯಾಗಿ ಉತ್ತರಿಸದ ದಲಿತ ವಿದ್ಯಾರ್ಥಿಗೆ ಹೊಡೆಯಬೇಕು ಎನ್ನಿಸಿದಲ್ಲಿ ದೂರದಿಂದಲೇ ನಿಂತು ಕೋಲನ್ನು ದಾರಾಳವಾಗಿ ಅವರ ಕಡೆಗೆ ಒಗೆಯುವ ಕೃಪೆಗೈದಿದ್ದರು. ಇಂಥ ಮಹನೀಯರು ಆಂಗ್ಲಭಾಷೆಯನ್ನು ಹೇಳಿಕೊಡುತ್ತಿದ್ದಾಗ ವಿದ್ಯಾರ್ಥಿಗಳ ಬುದ್ಧಿಮತ್ತೆಯನ್ನು ಆಗಾಗ್ಗೆ ಪರೀಕ್ಷೆ ಮಾಡುತ್ತಿದ್ದರು. ಈ ಚಟವನ್ನು ಹತ್ತಿಕ್ಕಲಾರದೆ ತರಗತಿಯಲ್ಲಿ ಒಂದು ಪ್ರಶ್ನೆಯನ್ನು ದಲಿತ ಐಕಳತ್ತ ಎಸೆದೇಬಿಟ್ಟರು. "ಲೊ ಮಾದ'My shirt is loose' ಇದನ್ನು ಕನ್ನಡದಲ್ಲಿ ಹೇಳೊ" ಎಂದು. ವಿದ್ಯಾರ್ಥಿ ಮಾದ ಕೊನೆಯ ಬೆಂಚಿನಲ್ಲಿ ಕುಳಿತ ಕೊಳ್ಳುತ್ತಿದ್ದರೂ ಸಹ ಹೇಳಿದುದನ್ನು ಗ್ರಹಿಸಿಕೊಳ್ಳುತ್ತಿದ್ದರಿಂದ ಧೈರ್ಯವಾಗಿಯೇ ನಿಂತು 'ನನ್ ಚೊಗೆ ಜಾಗಳ್ಕೆ ಸಾ' ಎಂದು ತರ್ಜುಮೆ ಮಾಡಿದ. ಮೇಲುಕೋಟೆಗೆ ಈ ಶಬ್ದಗಳು ಅಚ್ಚರಿಯನ್ನು ಉಂಟುಮಾಡಿದವು. 'ಆಂಡವನೇ ಈ ಊರಿನ ಹೊಲೆಮಾದಿಗರು ಯಾವ ಭಾಷೆ ಮಾತಾಡ್ತಾರೋ. ಕನ್ನಡವನ್ನು ಕಲಿಯದ ಈ ಮುಂಡೇವ್ಕೆ ವಿದ್ಯೆ ಬೇರೆ ಕೇಡು' ಎಂದುಕೊಂಡು ಬ್ರಾಹ್ಮಣ ಹುಡುಗರತ್ತ ತಿರುಗಿ 'ರಮೇಶ ನೀ ಹೇಳೋ' ಎಂದರು. ರಮೇಶ ಎದ್ದು ನಿಂತು 'ನನ್ನ ಅಂಗಿ ಸಡಿಲವಾಗಿದೆ' ಎಂದು ಬಾಯಿಪಾಠ ಮಾಡಿದಂತೆ ಉತ್ತರಿಸಿದ. ಹ್ಞಾ.... ಇದು ನನಗೆ ಗೊತ್ತಿರುವ ಕನ್ನಡ ಎಂದು ಸಮಾಧಾನಮಾಡಿಕೊಂಡು 'ಲೊ ಮಾದ ನಾಳೆಯಿಂದ ನೀನು ಕನ್ನಡ ಕಲಿತುಕೊಂಡು ಬರದಿದ್ದರೆ ಬೆತ್ತ ಮೂರು ತುಂಡಾದೀತು' ಎಂದು ಎಚ್ಚರಿಸಲು ಮರೆಯಲಿಲ್ಲ. ಆಡು ಭಾಷೆಯ ಗಂಧಗಾಳಿಯನ್ನು ಅರಿಯದ ಮೇಲುಕೋಟೆಯಂತಹ ಉಪಾಧ್ಯಾಯರ ಅಜ್ಞಾನಕ್ಕೆ ಎಷ್ಟೋ ದಲಿತಮಕ್ಕಳ ಚಮ್ಡ ಸುಲಿದು ಹೋಗಿರಬೇಕು !

(ನನ್ನಪ್ಪನಿಂದ ಕೇಳಿದ್ದು)

—ಟಿ.ಎಂ.ಪಿ.ಮೂರ್ತಿ

## ಕೊಲ್ಲಲು ಪ್ರಯತ್ನ: ಆಕಸ್ಮಿಕ ಪಾರು

ಪಿರಿಯಾಪಟ್ಟಣ : ರಾಜನಬೆಳಗಲಿ ಗ್ರಾಮದಲ್ಲಿ ಕೊಬ್ಬಿದ ಗೌಡನೊಬ್ಬನಿಂದ ಬಡ ದಲಿತನೊಬ್ಬನ ಕೊಲೆ ಪ್ರಯತ್ನ ನಡೆದು ಸ್ವಲ್ಪದರಲ್ಲಿ ಪಾರಾಗಿರುವ ಘಟನೆ ಜರುಗಿದೆ.

ತನ್ನ ಹಣ ಮತ್ತು ದರ್ಪದಿಂದ ಏಳೂರುಗಳನ್ನು ನಡುಗಿಸಿಕೊಂಡು ಇರುವ ತಿರುಮಲೆ ಗೌಡರು ತನ್ನ ವಿರುದ್ಧ ತಲೆ ಎತ್ತಲು ಯತ್ನಿಸಿದ ತಿಪಲೆಗೌಡನನ್ನು ಕೊಲೆಮಾಡಿ ಮುಗಿಸಿಬಿಡಲು ಪ್ಲಾನು ಮಾಡಿ, ತನ್ನ ಮನೆಯ ಜೀತಗಾರ ಕರಿಯಯ್ಯನಿಗೆ ಹತ್ತುಸಾವಿರ ರೂಪಾಯಿಗಳ ಆಶೆತೋರಿಸಿ ತಿಪಲೆಗೌಡನ ಕತ್ತು ಕತ್ತರಿಸಿ ಹಾಕಲು ಒತ್ತಾಯಿಸಿದರು. ಆದರೆ ಮಾನವಂತ ಸ್ವಾಭಿಮಾನಿ ದಲಿತ ಕರಿಯಯ್ಯ ಈ ಕೊಲೆಮಾಡಲು ಒಪ್ಪದೆ ನಿರಾಕರಿಸಿ ಜೀತ ಬಿಟ್ಟು ಹೊರಬಂದರು. ಈ ತಪ್ಪಿಗಾಗಿ ಮಾರ್ಚಿ 2ನೇ ತಾರೀಖು ಮಂಗಳವಾರ ತಿರುಮಲೇಗೌಡರು ಕರಿಯಯ್ಯನನ್ನೇ ಕೊಂದುಬಿಡಲು ಮಚ್ಚುದೊಣ್ಣೆಗಳಿಂದ ಹಲ್ಲೆ ನಡೆಸಿದ್ದಾರೆ! ಸ್ವಲ್ಪವೇ ಸ್ವಲ್ಪದರಲ್ಲಿ ಸಾವಿನಿಂದ ಪಾರಾಗಿರುವ ಕರಿಯಯ್ಯನ ತಲೆ ಎರಡು ಇಂಚಿನಷ್ಟು ತೂತಾಗಿ ಎಡತೋಳು ಮುರಿದುಹೋಗಿವೆ!! ಎಂಟು ತಿಂಗಳ ಹಿಂದೆ ಕೂಡ ಕರಿಯಯ್ಯನ ಹೆಂಡತಿ ಮತ್ತು ತಾಯಿಯನ್ನು ಕಂಬಕ್ಕೆ ಕಟ್ಟಿ ಹೊಡೆದು ಅವಮಾನಿಸಲಾಗಿತ್ತು,

ಇಷ್ಟೆಲ್ಲಾ ನಡೆದಿದ್ದರೂ ಕೊಲೆ ಮಾಡಲು ಯತ್ನಿಸಿದ ಭೀಕರ ತಪ್ಪಿಗಾಗಿ ಇಷ್ಟೊತ್ತಿಗೆ ಬಂಧನದಲ್ಲಿರಬೇಕಾಗಿದ್ದ ತಿರುಮಲೆಗೌಡರು ಪಿರಿಯಾಪಟ್ಟಣದ ಹೊಣೆಗೇಡಿ. ಲಂಚಕೋರ ಪೋಲೀಸರಿಂದಾಗಿ ಮೀಸೆಮೇಲೆ ಕೈ ಮಾಡಿ ತಿರುಗಾಡುತ್ತಿದ್ದಾರೆ! ಆದ್ದರಿಂದ ಕರಿಯಯ್ಯನನ್ನು ಕೊಲ್ಲುವ ಯತ್ನದಲ್ಲಿ ಪೋಲೀಸರೂ ಷಾಮೀಲಾಗಿದ್ದಾರೆ ಎಂದು ಭಾವಿಸಬೇಕಾಗಿದೆ. ಪೋಲೀಸರ ಈ ಹೊಣೆಗೇಡಿತನವನ್ನು ದ.ಸಂ.ಸ. ಪ್ರತಿಭಟಿಸುತ್ತದೆ.

---

## ನೋವುಗಳ ನಡುವೆ

[ಒಂದನೇ ಪುಟದಿಂದ]

ಕೊಲೆಗಳ ಹಿನ್ನೆಲೆಯಲ್ಲಿ ಅವರ ಬೇಜವಾಬ್ದಾರಿತನ ಕೂಡಾ ಬೆಟ್ಟದಷ್ಟಿದೆ. ಅವರು ಕೂಡಾ ಈಗಲೇ ಎಚ್ಚರಗೊಳ್ಳುವುದು ಒಳಿತು.

ಮೈಸೂರು ಬೆಂಗಳೂರು ಕೊಡಗು ಹಾಸನ ಶಿವಮೊಗ್ಗ ಚಿಕ್ಕಮಗಳೂರು ಕೋಲಾರ ಗುಲ್ಬರ್ಗ ಧಾರವಾಡ ಮುಂತಾದ ಎಲ್ಲಾ ಜಿಲ್ಲಾ ಕೇಂದ್ರಗಳಲ್ಲು, ತಾಲ್ಲೂಕು ಕೇಂದ್ರಗಳಲ್ಲು ಧರಣಿ ನಡೆದಿದೆ. ಕೆಲವೆಡೆ ಮಂತ್ರಿ, ಶಾಸಕರ ಪ್ರತಿಕೃತಿ ದಹನವೂ ಆಗಿದೆ.

ಮೇಲ್ಕಂಡ ವ್ಯಾಪಕ ಧರಣಿಗಳಿಂದ ನಮ್ಮ ಮಂತ್ರಿ ಶಾಸಕರು ಎಚ್ಚರಗೊಳ್ಳಬೇಕಾಗಿತ್ತು. ದಲಿತರ ನೋವುಗಳ ನಡುವೆ ಮೂಡಿಬಂದ ದ ಶಾಸಕರು, ಜೀವರಕ್ಷಣೆಕೋರಿ ಮನೆ ಮುಂದೆ ಕುಂತಿದ್ದ ದ. ಸಂ. ಸ. ಕಾರ್ಯಕರ್ತರ ಮೇಲೆ ಹಲ್ಲೆ ನಡೆಸುವಷ್ಟು ಕ್ರೂರರಾಗಿದ್ದಾರೆ. ಯಾರು ಕೊಲೆಯಾದವರ ಪ್ರತಿನಿಧಿಗಳೋ ಅವರು ದಲಿತರ ಕೊಲೆಗೆ ರೆಡಿಯಾಗುತ್ತಿದ್ದಾರೆ. ಮೈಸೂರಿನಲ್ಲಿ ಶ್ರೀನಿವಾಸ ಪ್ರಸಾದ್, ಕೋಲಾರದಲ್ಲಿ ಆಮರ್ಜುಗಂ ಇಂಥಾ ಹೀನ ಕೆಲಸಕ್ಕಿಳಿದಿದ್ದಾರೆ. ದಲಿತರ ವೋಟುಗಳಿಂದ ಮೇಲೆ ಬಂದ ಇವರು ನ್ಯಾಯ ಕೇಳಲು ಬಂದವರ ಮೇಲೆ ಹಲ್ಲೆ ನಡೆಸಿ ಮನುಷ್ಯತ್ವ ಕಳೆದುಕೊಂಡಿದ್ದಾರೆ,

ಈಗಲು ಕಾಲ ಮಿಂಚಿಲ್ಲ; ಅವರು ಮನುಷ್ಯರಾಗಬೇಕೆಂದೂ, ದಲಿತರ ನಿಜವಾದ ಪ್ರತಿನಿಧಿಗಳಂತೆ ನಡೆದುಕೊಳ್ಳಬೇಕೆಂದೂ ದ. ಸಂ.ಸ. ಈ ಮೂಲಕ ಒತ್ತಾಯಿಸುತ್ತದೆ. ಕಡುದಾರಿದ್ರ್ಯ ದುಃಖಗಳಲ್ಲಿ ಕುದಿಯುತ್ತಿರುವ ಜನತೆ ದ. ಸಂ. ಸ. ನಾಯಕತ್ವದಲ್ಲಿ ಒಂದಾಗುತ್ತಿದೆ. ದಲಿತರ ನಾಯಕತ್ವದಲ್ಲಿ ಎಲ್ಲಾ ಜಾತಿಯ ಬಡವರೂ ಸೇರಿ ಈ ದೇಶದ ರಾಜಕೀಯ ಶಕ್ತಿಯನ್ನು ಒಂದಲ್ಲ ಒಂದು ದಿನ ಹಿಡಿದೇ ಹಿಡಿಯುತ್ತಾರೆ, ಕೊಲೆ ಸುಲಿಗೆ ಇಲ್ಲದ ಭ್ರಷ್ಟಾಚಾರವಿಲ್ಲದ ಇಂಡಿಯಾವನ್ನು ಕಟ್ಟಲು ಉಳಿದಿರುವ ಅನಿವಾರ್ಯ ಕ್ರಿಯೆ ಇದು....

## ನಿವೇಶನಕ್ಕಾಗಿ ನಿರಂತರ ಕಿರುಕುಳ

**ಹುಣಸೂರು ;** ಉಯಿಗೊಂಡನಹಳ್ಳಿ ಗ್ರಾಮದ ಬಲಿಷ್ಠರಾದ ಗಿರಿಗೌಡ, ಚಂದ್ರಶೇಖರಪ್ಪ. ಮೀಸೆ ಚಿಕ್ಕೇಗೌಡ, ಸಿಗರೇಟ್ ಮಲ್ಲೇಗೌಡ ಎಂಬ ಊರಿನ ಮುಖಂಡ ಬಡ ಲಿಂಗಾಯಿತ ಕೋಮಿಗೆ ಸೇರಿದ ಮಲ್ಲಾಜಮ್ಮ ಎಂಬ ವಿಧವೆಗೆ ನಿರಂತರವಾಗಿ ಕಿರುಕುಳ ಕೊಡುತ್ತಿದ್ದಾರೆ.

ಹತ್ತು ವರ್ಷಗಳ ಹಿಂದೆ ಸರ್ಕಾರದಿಂದ ಆಕೆಗೆ ಮನೆ ನಿವೇಶನ ದೊರೆತಿದ್ದು (ನಂ. 309), ಆ ನಿವೇಶನವನ್ನು ಕಿತ್ತು ಕೊಳ್ಳುವ ಸಲುವಾಗಿ ಈ ದಬ್ಬಾಳಿಕೆ ಕಿರುಕುಳ ನಡೆಯುತ್ತಿದೆ. ಒಬ್ಬಂಟಿಯಾದ ಆಕೆಯ ನಿವೇಶನವನ್ನು ಊರಿನ ಜಮೀನುದಾರನಾದ ಚನ್ನಪಟ್ಟಣದ ಪುಟ್ಟಸ್ವಾಮಿಗೌಡರಿಗೆ ಬಿಟ್ಟು ಕೊಡುವಂತೆ ಬಲವಂತ ಪಡಿಸಲಾಗೂ ಆಕೆ ಬಿಟ್ಟುಕೊಡದಿರಲು, ಆ ನಿವೇಶನ ಊರಿನ ಅಭಿವೃದ್ಧಿಗೇ ಬೇಕೆಂದು ಬಲಾತ್ಕಾರದಿಂದ ಅಲ್ಲಿಂದ ಓಡಿಸಿ ಅದರ ಬದಲು ಊರಲ್ಲಿ ವಾಸವಾಗಿರದ ಆಕೆಯ ಅಳಿಯನ ಸೈಟಿನಲ್ಲಿ ಮನೆಕಟ್ಟಲು ಅನುಮತಿ ಕೊಟ್ಟರು. ಅಲ್ಲಿ ಮನೆ ಕಟ್ಟಲು ತೊಡಗಿದೊಡನೆ ಅದು ನನಗೆ ಸೇರಿದ್ದೆಂದು ಚಂದ್ರಶೇಖರಪ್ಪ ಎಂಬುವವ ತಕರಾರು ತೆಗೆದು ಅಲ್ಲಿಂದಲೂ ಓಡಿಸಿ ಬೇರೊಂದು ಜಾಗ ತೋರಿಸಿದ. ಹೀಗೆ ನಾಲ್ಕೈದು ಜಾಗ ತೋರಿಸುವುದು ಓಡಿಸುವುದು ಮಾಡುತ್ತಿರಲು ಬೇಸತ್ತ ಮಲ್ಲಾಜಮ್ಮನು ತನಗೆ ಸರ್ಕಾರದಿಂದ ದೊರತಿದ್ದ ನಿವೇಶನದಲ್ಲಿಯೇ ಮನೆ ಕಟ್ಟಲು ತೊಡಗಿದರು.

ಹೀಗೆ ಮನೆ ಕಟ್ಟುವ ಕೆಲಸ ನಡೆಯುತ್ತಿರುವಾಗ 5.2.82ರಂದು ಮೇಲ್ಕಂಡ ಮುಖಂಡರು ತಮ್ಮ ಗುಂಪಿನೊಂದಿಗೆ ಬಂದು ಕೆಲಸ ಮಾಡದಂತೆ ತಡೆಮಾಡಿ ಮಲ್ಲಾಜಮ್ಮನನ್ನು ಹೀನಮಾನವಾಗಿ ಬೈದು ಎಳೆದಾಡಿ ಅವಮಾನ ಪಡಿಸಿದ್ದಲ್ಲದೆ ಗ್ರಾಮದಿಂದಲೇ ಓಡಿಸುವುದಾಗಿ ಬೆದರಿಕೆ ಹಾಕಿರುವರು.

ಮಲ್ಲಾಜಮ್ಮನು ಈ ಸಂಬಂಧದಲ್ಲಿ ಪೋಲೀಸ್ ಕಂಪ್ಲೇಂಟ್ ಕೊಡಲು ಹುಣಸೂರಿಗೆ ಹೋದ ಸಮಯದಲ್ಲಿ ಸೈಜು ಕಲ್ಲುಗಳನ್ನು ಸಾಗಿಸಿದ್ದಲ್ಲದೆ 60-70 ಗಾಡಿಯಷ್ಟು ಮಣ್ಣನ್ನು ಉಪಯೋಗಿಸಿಕೊಂಡು ನಾಟಕದ ಸ್ಟೇಜ್ ಮಾಡಿಕೊಂಡಿರುತ್ತಾರೆ. ಈ ಬಗ್ಗೆ ಯಾವುದೇ ಕ್ರಮ ತೆಗೆದುಕೊಂಡಿರದ ಪೋಲೀಸರ ಬೇಜವಾಬ್ದಾರಿ ತನವನ್ನು ದ.ಸಂ.ಸ ಖಂಡಿಸಿದೆ.

## ನೀರಿನ ಮಾತಿಗೆ ಹಲ್ಲೆ

ಹುಣಸೂರು ತಾಲ್ಲೂಕು ಉಯಿಗೊಂಡನಹಳ್ಳಿಯಲ್ಲಿ ದಲಿತ ಬೆಟ್ಟಯ್ಯ ಎಂಬುವರ ಮೇಲೆ ಮೇಲ್ಜಾತಿಯ ಕೆಲವರು ಅಮಾನುಷವಾಗಿ 1. 3. 82ರಂದು ಹಲ್ಲೆ ನಡೆಸಿರುವರು. ಊರಿನಲ್ಲಿ ಎರಡು ಬೋರ್‌ವೆಲ್‌ಗಳಿದ್ದು ಹರಿಜನರ ಬೋರ್‌ವೆಲ್ ಕೆಟ್ಟಿತ್ತು. ಬೇರೆ ನೀರಿನ ಮೂಲಗಳಿಲ್ಲದ್ದರಿಂದ ಮೇಲ್ಜಾತಿಯ ಬೋರ್‌ವೆಲ್‌ನಲ್ಲಿ ದಲಿತರು ನೀರು ತೆಗೆದುಕೊಳ್ಳುವುದು ಅನಿವಾರ್ಯವಾಯಿತು. ದಲಿತರ ಕೇರಿಯ ಬೋರ್‌ವೆಲ್ ರಿಪೇರಿ ಇತ್ತೀಚೆಗೆ ಬಂದುದು. ಅದಕ್ಕೆ ಮೊದಲು ಹರಿಜನರು ಮೇಲ್ಜಾತಿಯವರ ಬೋರ್‌ವೆಲ್‌ನಲ್ಲಿ ನೀರು ತೆಗೆದುಕೊಳ್ಳುತ್ತಿದ್ದರು.

ಮೇಲ್ಕಂಡ ಜಾತಿವಾದಿಗಳ ನಡವಳಿಕೆಯನ್ನು ದಲಿತ ಸಂಘರ್ಷ ಸಮಿತಿ ತೀವ್ರವಾಗಿ ಖಂಡಿಸಿದೆ.

—ಮುಳ್ಳೂರು ನಾಗರಾಜ

ಬೇಸಗೆಯ ಒಂದು ದಿನ ಎಂದಿನಂತೆ ಹೊತ್ತು ಮೂಡಿ ಬೆಳಕಾಗಿತ್ತು. ಚಮಾರರ ಕೇರಿಯ ಹೆಂಗಸರು, ಮಕ್ಕಳು, ಮುದುಕರಾದಿಯಾಗಿ ನಡುಬೀದಿಯಲ್ಲಿ ಕೂತು ಎಳೆಬಿಸಿಲಿನಲ್ಲಿ ಮೈ ಕಾಯಿಸುತ್ತಾ ಅದೂ ಇದೂ ಹರಟೆಯಲ್ಲಿ ಮುಳುಗಿದ್ದರು.

ಜೂರಿಯಾಮಾತ್ರ ಒಂಟಿಯಾಗಿ ಗುಡಿಸಿಲಿನ ನೆರಕೆ ಬಾಗಿಲಿಗೆ ಆತುಕೊಂಡು ಬೀದಿಯಲ್ಲಿ ಕಸ ಬಳಿಯುತ್ತಿದ್ದ ತನ್ನ ಮುದ್ದುಮಗಳು ದನಿಯ್ಳನ್ನು ರೆಪ್ಪೆ ಮಿಟುಕಿಸದೆ ನೋಡುತ್ತಾ ಕಣ್ಣು ತುಂಬಿಸಿಕೊಳ್ಳುತ್ತಿದ್ದಳು. ಅವಳ ಮನಸ್ಸು ಮಾತ್ರ ನಿಂತಲ್ಲಿ ನಿಲ್ಲದೆ ಕೂತಲ್ಲಿ ಕೂರದೆ ಎಲ್ಲೆಲ್ಲೋ ಅಲೆಯುತ್ತಿತ್ತು; ಈಗಲೊ ಇನ್ನೊಂದು ಗಳಿಗೆಗೊ ಪ್ರಾಯಕ್ಕೆ ಬರುವಂತೆ ಕಾಣುತ್ತಿದ್ದ ಹುಡುಗಿ ದನಿಯಾ ಮನೆಯಂಗಳದಲ್ಲಿ ಕಸಗುಡಿಸುತ್ತಿತ್ತು. 'ನಿಮ್ಮಪ್ಪ ಎಲ್ಲಿಗೆ ಹೋದನೆಂದು ಜೂರಿಯಾ ಮಗಳನ್ನು ಕೂಗಿ ಕೇಳಿದಳು. ಹುಡುಗಿ 'ಅಪ್ಪ ಹುಲ್ಲು ಕುಯ್ಯಲು ಹೋಗಿದ್ದಾನೆಂದು' ಹೇಳಿತು'. ತಡೆಯಲಾರದಷ್ಟು ಸಿಟ್ಟು ಬಂತು ಜೂರಿಯಾಳಿಗೆ. ಆಕೆಯ ಹಣೆಯಲ್ಲಿ ನಿರಿಗೆಗಳಿದ್ದು ಗಂಟಿಕ್ಕಿದವು. 'ಹ್ಞಂ', ಎಂದು ತನಗೆತಾನೆ ಗೊಣಗಿಕೊಳ್ಳುತ್ತ ಜೂರಿಯಾ ತನ್ನ ಗಂಡ ಧುಖಿ ಚಮಾರನನ್ನು ಹುಡುಕ ಹೊರಟಳು. ಅಗೋ ಅಲ್ಲಿ, ಒಡಲ ಜ್ವರದಿಂದ ಸೀದು ಕಡ್ಡಿಯಾಗಿರುವ ದುಖಿ: ಹಸಿವಿನಿಂದ ತತ್ತರಿಸುತ್ತಿರುವ ದುಖಿ–ಹುಲ್ಲು ಕುಯ್ಯುತ್ತಿದ್ದಾನೆ. ಅವನಿಗೆ ಬರುವ ಕೆಲಸ ಅದೊಂದೆ. ಪಂಡಿತ ಘಾಶೀರಾಮ್ ಮನೆಗೆ ಹೋಗಿ ಮಗಳ ಮದುವೆಗೆ ಒಂದು ಒಳ್ಳೆಯ ದಿನ ಗೊತ್ತು ಮಾಡಿಕೊಂಡು ಬರಬೇಕೆನ್ನುವ ಗ್ಯಾನ ಬೇಡವೆ ಇವನಿಗೆ? ಹೆಂಡತಿಯತ್ತ ದುರದುರನೆ ನೋಡಿದ ದುಖಿಗೆ ಮೈಯುರಿದು ಹೋಯ್ತು; ತಾನು ಹುಲ್ಲು ಕುಯ್ತಿರೋದು ಯಾಕೆ ಗೊತ್ತಾ ಇವಳಿಗೆ? ಅಂಥ ದೊಡ್ಡ ಪಂಡಿತರ ಮನೆಗೆ ಬರಿಗೈಯಲ್ಲಿ ಹೋಗೋದು ಸರಿಬರುತ್ತಾ? ಇವಳು ತಾನೇನು ತನ್ನ ಕೆಲ್ಸ ಏನು ನೋಡಿಕೊಂಡು ಸುಮ್ಮನಿರೋಕ್ಕೆ ಏನು ಕಷ್ಟ? ಪಂಡಿತರು ಅಕಸ್ಮಾತ್ ಮನೆಗೆ ಬಂದರೆ ಎಲ್ಲಿ ಕೂರ್ತಾರೆ? ಹೊಲೆಯರ ಮನೆ ಮಂಚದ ಮೇಲೆ ಕೂರೋದು ಸಾಧ್ಯ ಇಲ್ಲ. ಅದಕ್ಕೇನು ಮಾಡಿದಾಳೆ?

ಜೂರಿಯಾಳದು ಅಸ್ಪೃಶ್ಯತೆಯ ಬಾಳಾದರೂ ಅವಳ ತಿಳುವಳಿಕೆ ಏನು ಕಡಿಮೆ ಇರಲಿಲ್ಲ; ಊರಿನ ಯಜಮಾನನ ಮನೆಯಿಂದ ಒಂದು ಮಂಚ ಕೇಳಿ ತರಬೇಕೆಂದುಕೊಂಡಿದ್ದಳು. ಆದರೆ ದುಖಿಯಾ ಆಕೆ ಇನ್ನೂ ಕಲಿಯಬೇಕಾಗಿದ್ದ ಬಾಳಿನ ಪಾಠಗಳನ್ನು ಹೇಳಿ : ಮಂಚ ಅಲ್ಲ, ಒಂದು ಬೆಂಕಿ ಕೆಂಡ ಸುದಾ ನೆರೆಮನೆಯಿಂದ ಈಗ ತರಬಾರದು. ಮಾಹುವಾ ಎಲೆಗಳಿಂದ ಒಂದು ಚಿಕ್ಕ ಮುದಲಿಗೆ ಹೆಣೆದರೆ ಅದರ ಮೇಲೆ ಪಂಡಿತರು ಕೂರಬಹುದು. ಯಾಕೆಂದರೆ ಮಾಹುವಾ ಎಲೆಗೆ ಮಡಿ ಮೈಲಿಗೆಯ ಸೋಂಕಿಲ್ಲ–ಅದು ಸದಾ ಪವಿತ್ರ. ಹಾಗೇ ಆ ಎಲೆಗಳಲ್ಲಿ ಒಂದು ಇಸ್ತ್ರಿಹಾಳೆ ಕಟ್ಟಿದರೆ ಅದರ ಮೇಲೆ ಏನಾದರೂ ದಕ್ಷಿಣೆಅಂತ ಇಟ್ಟುಕೊಡಬಹುದು. ಯಾವುದಾದರೂ ಗೋಂಡರ ಜಾತಿಯ (ಸ್ಪೃಶ್ಯ) ಹುಡುಗಿ ಜೊತೆ ಊರೊಳಗಿನ ಅಂಗಡಿಗೆ ಹೋಗಿ ಒಂದು ಸೇರು ಗೋಧಿಹಿಟ್ಟು, ಅರ್ಧ ಸೇರು ಅಕ್ಕಿ, ಒಂದು ಪಾವು ಬೇಳೆ, ಅರ್ಧ ಪಾವು ತುಪ್ಪ, ಉಪ್ಪು, ಹುಣಿಸೇಹಣ್ಣು ತರಬೇಕು. 'ಹ್ಞಾ'! ಜೊತೆಗೆ ನಾಲ್ಕಾಣೆ ದಕ್ಷಿಣೆ ಕಾಸು ಇಡೋಕ್ಕೆ ಮರೀಬಾರ್ದು.

ಅಪ್ಪಿ ತಪ್ಪಿ ಕೂಡ ಜೂರಿಯಾ ಏನನ್ನೂ ಮುಟ್ಟಬಾರದು! ಆಮೇಲೆ ಎಲ್ಲಾ ಗಡಿಬಿಡಿಯಾದರೆ ತೊಂದರೆ!

ಊಟಕ್ಕೆ ಕೂತರೆ ಒಂದು ಮೈಲಿ ದೂರದಲ್ಲಿರೊ ಬ್ರಾಹ್ಮಣರ ಮನೆಗೆ ಹೋಗುವುದು ತಡವಾಗಿ ಪಂಡಿತರು ಸಿಗದೆ ಹೋಗಬಹುದೆಂದು ದುಖಿ ಊಟವೇ ಬೇಡ ಅಂದ. ಕರ್ನೊಂಬರೋದು ತಾನೆ, ಅವರೇನು ಭಾಳ ಹೊತ್ತು ಮಾಡಲ್ಲ. ಬರೋದ್ರೊಳಗೆ ಎಲ್ಲಾ ರೆಡಿಯಾಗಿರಲಿ ಎಂದು ದುಖಿ ಹೆಂಡತಿಗೆ ಮತ್ತೊಮ್ಮೆ ನೆನಪಿಸಿದ.

ಂ ಂ ಂ ಂ

ಬೆಳಗಿನ ಸ್ನಾನವಾದ ನಂತರ ಮೈಗೆ ಗಂಧ ಹಚ್ಕೊಬೇಕಾದರೆ ಪ್ರೀತಿ–ವಿಶ್ವಾಸ, ಭಯ–ಭಕ್ತಿಯಿಂದ ಎಚ್ಚರವಾಗಿರಬೇಕು; ಅದರಲ್ಲೇ ತಾನೆ ಬ್ರಾಹ್ಮಣನ ಸಕಲೆಂಟು ಶಕ್ತಿ–ಯುಕ್ತಿಗಳೆಲ್ಲ ಅಡಗಿರೋದು. ಬೊಜ್ಜಿನಿಂದ ಡೊಳ್ಳಾದ ಹೊಟ್ಟೆ ಕೂಡ ಬ್ರಾಹ್ಮಣರ ಗುರುತಲ್ಲವೇ. ಪಂಡಿತ ಘಾಶೀರಾಮ್ ಈ ನಾಮ ಇಡುವ ಕಲೆಯಲ್ಲಿ ನಿಷ್ಣಾತ. ಎಷ್ಟೇ ನಿಧಾನವಾದರೂ ಆ ಕೆಲಸ ಸಾಂಗವಾಗಿಯೇ ನೆರವೇರಬೇಕು. ಇವಾದ ನಂತರ ಬೆಳಗಿನ ಪೂಜೆಗೆ ಪಂಡಿತರು ಕೂತರೆ ಅವರ ಹೆಂಡತಿ, ಗುಂಡಗೆ ಚಿವುಟಿದರೆ ಚಿಲ್ಲನೆ ರಕ್ತ ಬರೊ ಹಾಗೆ ತುಂಬಿಕೊಂಡ ಲಕ್ಷ್ಮಿ (ಪಂಡಿತರ ಮೂರನೆ ಹೆಂಡತಿ; ಇಬ್ಬರು ತೀರಿಕೊಂಡ ಮೇಲೆ ಬಂದವಳು–ಎಲ್ಲಾ ದೈವೇಚ್ಛೆ) ಒಳಗಿನ ಅಂಗಳದಲ್ಲಿ ಕೂತು ತರಕಾರಿ ಹಚ್ಚುವುದು–ಮಧ್ಯಾಹ್ನದ ಊಟಕ್ಕೆ. ಹೊರಗೇನೋ ನಾಯಿ ಬಗುಳಿದ ಹಾಗೆ ಸದ್ದು. ಯಾರೋ ಪಂಡಿತರನ್ನು ಕಾಣಲಿಕ್ಕೆ ಬಂದವ ಹೊರಗಿರಬೇಕು. ಪೂಜೆ ಮುಗಿಸಿದ ಪಂಡಿತರು ಎಲಕ್ಕಿ ಹಾಕಿ ಕೆಂಪಗೆ ಕಾಯಿಸಿ, ಅದರ ಮೇಲೆ ತುಪ್ಪ ಹಾಕಿದ ಒಂದು ಲೋಟ ಭರ್ತಿ ಹಾಲನ್ನು ಗಂಟಲೊಳಗಿಳಿಸಿ ಬೀದಿ ಬಾಗಿಲಿಗೆ ಬಂದರು.

ಪ್ರೇ...

ಹುಟ್ಟಿನಿಂದಲೆ ವ್ಯಕ್ತಿ...
ಶೀರ್ಮಾನಿಸಿಬಿಡುವ, ಮನ...
ವ ವ್ಯಕ್ತಿಯ ಹಿಂದಿರುವ ಕ್ರೌ...
ಯಾಗಿ ನಿರೂಪಿಸುತ್ತದೆ.
ಲೇಖಕ ಪ್ರೇಮ್‌ಚಂದ್
ಅರವತ್ತು ವರ್ಷಗಳ ಹಿಂದ...
ಈವತ್ತೂ ನಮಗೆ ಕಾಣಬರು...

ಹೊರಗೆ ಅಂಗಳನಲ್ಲಿ ದುಖಿ ಚಮಾ...
ಗಾಲಿನಲ್ಲಿ ಕೂತದ್ದು ಕಾಣಿಸಿತು.
ಮಹಾರಾಜರಿಗೆ, ಕೂತಲ್ಲಿಂದಲೆ...
ದ್ದಕ್ಕೂ ದೈಬಾಗಿ ದುಖಿ ಅಡ್ಡ ಬಿ...
ಏನೋ ಯೋಚನೆಯಲ್ಲಿದ್ದಂತೆ ಮಾ...
ತರು "ಯಾವಾಗಂದ್ರೆ ಆವಾಗ ಕರೆದ...
ಬರೋಕೆ ನನಗೆ ಬೇರೆ ಕಸುಬಿಲ್ಲ...
ಎಂದರು. ಅವರ ಮನಸ್ಸಾಗಲೆ ಈ...
ಯಿಂದ ದಕ್ಕುವ ಲಾಭ–ನಷ್ಟಗಳ...
ತೊಡಗಿತ್ತು. ಪುರೋಹಿತರು "ನೀನ...
ಹೊತ್ತು ಕಾಯಬೇಕು" ಎಂದು
ಚಮಾರನಿಗೆ ಆಜ್ಞಾಪಿಸಿದರು.
ಬಾಯಿಂದ ಅಷ್ಟು ಕೇಳಿದಕ್ಕೇ ಚಮ...
ಕಣ್ಣುಗಳಲ್ಲಿ ಏನೋ ಹೊಳಪು: ಪ...
ಪುರೋಹಿತರು 'ಹ್ಞೂಂ' ಅಂದಮೇಲೆ...
ಆದಂಗೇನೆ–ಸ್ವಲ್ಪ ತಡವಾಗಬಹುದು.
ಅಲ್ಲಿ ಕೂತು ಹೊತ್ತು ಕಳೆಯೋ ಬದಲು...

## ವಿಷನಾಗರ ದೇವಿಯು ಜ...

ಇಸನಾಗರದೇವಿ ಏಳು ಕೊಳ್ಳದೆಲ್ಲ...
ಶರಣಗಳು ನನ್ನಾ ಅಭಿಮಾನಿ ತಾಯಿ...
ಉಟ್ಟಿಗೆ ಉಣಿಸಿದ್ದಿ ಬತ್ತಲೆ ಕುಣಿಸಿದ್ದಿ
ನಕ್ಕವರ್ಹಲ್ಲು ನೀ ಮುರಿಸಿದ್ದಲ್ಲೆ ॥ಇಸ॥
ಸುತ್ತಿದ್ದ ಗಂಡಸರ ಮೀಸೆ ತೆಗಿಸಿದ್ದಿ
ಮೀಸೆ ತೆಗಿಸಿದ್ದಿ ಸೀರೆ ಉಡಿಸಿದ್ದಿ ॥ಇಸ॥
ಮೈನ್ಯಾಗ ಮನದಾಗ ಹುತ್ತಾನೆ ಬೆಳೆಸಿ...
ಹುತ್ತಾಗ ಹತ್ತುತಲಿ ಕರಿನಾಗಸರಿಸಿದ್ದಿ...
ಎಲ್ಲರಂತಲ್ಲದ ಎಲ್ಲವ್ವ ತಾಯಿ ನೀ
ನಿನ ಮೋಡಿ ಜನನೋಡಿದಂಗಾಗಿ ನಿಂತ್ರ...
ಏಸೇಸೊ ಕರಸುತ್ತು ದೇವದಾಗ ಮೆರೆದಿ...
'ಥೂ' ಅಂದ್ರೆ ಎತ್ತೋಗಿ ಹಸುವಾಯಿ...
॥
ವರದ ಹಸ್ತನನ್ನೆತ್ತಿ ಹೆಡೆಯಂಗೆ ಆಡಿಸಿದ್ದಿ...
ನಂಜೇರಿದಂಗೆ ಜೆಳಕು ಕಪ್ಪಾಯಿತಲ್ಲೇ ॥
ಎಷ್ಟಂತ ನಾ ನಿನ್ನ ಗುಣಗಾನ ಮಾಡಲಿ

ಸಣ್ಣ ಕಥೆ

ಬದುಕು, ಭವಿಷ್ಯಗಳೆಲ್ಲವನ್ನೂ
ಂಗಳಂತೆ ನಡೆಸಿಕೊಳ್ಳುವ ಜಾತಿ
'ಸದ್ಗತಿ' ಕರುಣಪರಿಣಾಮಕಾರಿ
ರ್ಷಗಳ ಹಿಂದೆ ಖ್ಯಾತ ಹಿಂದಿ
ಮುಂದಿಡುವ ದುರಂತವೆಂದರೆ
ಡ ಕೊಳಕು ಹೊಲಸುಗಳೆ
ಅನು : ಚಂದ್ರಶೇಖರ

ಕಸ ಅಷ್ಟು ಹೊಡೆಯಕ್ಕಾಗಲ್ವೇನು ?
ಅಪ್ಪಣೆ ಕೊಡಿಸಿದರು ಮಹಾರಾಜರು.
ಾದು ಮಾರಾಜ್ ಎಂದ ಚಮಾರ
ತಂದ ಹುಲ್ಲಿನ ಹೊರೆ ಎಲ್ಲಿಡಲಿ' ಎಂದು
ದ್ದಕ್ಕೆ 'ಹಸುವಿನ ಮುಂದೆ ಕಣೊ ಮಡ್ಡ,
ಲ್ಲಿ ಇಡ್ತಿ' ಎಂದು ಪಂಡಿತರು ಗದರಿ
ತರು.

ಡಿಸುವ ಕಸುಬು ಚಮಾರ ತಾಯಿ
ಟ್ಟೆಯಿಂದ ಬರುವಾಗಲೆ ಕಲಿತು ಬಂದದ್ದು;
ಜ ಅವನನ್ನು ಉಳಿಸಿರೋದೆ ಹೊಲಸ್ನ
ಲಿಕ್ಕೆ. ಒಂದು ಚಣದಲ್ಲಿ ಕಸಗುಡಿಸಿ
ಸಿದ ಚಮಾರನಿಗೆ ಮಹಾರಾಜರು
ೀಡಪ್ಪಾ. ಒಂಚೂರು ಹುಣಿಸೆ ಮರದ ಕೆಳ
ಮರದ ಕೊಂಟನ್ನು ಅಷ್ಟು ಸೀಳಿ ಪಾಲು
ಕೊಡಕಾಗತ್ತಾ" ಎಂದರು. ಕಗ್ಗಲ್ಲಿನಂತೆ
ದ್ದ ಆ ಒಣಗಿದ ಕೊಂಟನ್ನು ನೋಡು
ತೆ ಬಿಳಿಚಿಕೊಂಡು ದುಖಿಯ ಮುಖದ

ಮೇಲೆ ನೋವು, ಅಸಹಾಯಕತೆಯ ಗೆರೆಗಳು ದಟ್ಟವಾಗಿ ಮೂಡತೊಡಗಿದವು. ಕೋಪಿಸಿಕೊಳ್ಳುವುದೆಂದರೆ ಏನೆಂದು ತಿಳಿಯದ ದುಖಿಗೆ ಹತಾಶೆ, ನೋವು. ದುಃಖವನ್ನು ಹಲ್ಲು ಕಚ್ಚಿ ನುಂಗಿಕೊಳ್ಳುವುದು ಮಾತ್ರ ಒಗ್ಗಿಹೋಗಿತ್ತು.

ಈ ನಡುವೆ ಸದಾ ತನ್ನ ನಗು, ಕುಣಿತ, ತುಂಟ ಮಾತುಗಳಲ್ಲಿ ಮುಳುಗಿರುತ್ತಿದ್ದ ಮುದ್ದು ಹುಡುಗಿ ದನಿಯಾ ಇವತ್ತು ಮಾತ್ರ ಅವಕ್ಕೆಲ್ಲ ತಡೆ ಹಾಕಿದ್ದಳು. ಗಾಂಭೀರ್ಯದ ಮುಸುಕಿನೊಳಗೆ ತನ್ನ ಹುಡುಗಾಟವನ್ನು ಅವಿಸಿಟ್ಟು ಮಾಹುವಾ ಎಲೆಗಳಿಂದ ಇಸ್ತ್ರಿಯ ಹಾಳೆ ಮಾಡುತ್ತಿದ್ದಳು. ಯಾಕೆಂದು ತಿಳಿಯದಿದ್ದರೂ ಅವಳಿಗೇನೋ ಸಡಗರ. ಇತ್ತ, ಪಂಡಿತ ಘಾಶೀರಾಮ್ ಹೆಂಡತಿ ಸತ್ತ ತರುಣನೊಬ್ಬನಿಗೆ ಗೀತೆಯ ಶ್ಲೋಕ ಉದಾಹರಣೆ ಕೊಟ್ಟು ಬುದ್ಧಿವಾದ ಹೇಳುತ್ತಿದ್ದರು. ಊಟವಿಲ್ಲದೆ ಈಗಾಗಲೆ ಸುಸ್ತುಗೊಂಡಿದ್ದ ದುಖಿ ಜೋಯಿಸರ ಮನೆ ಬಾಗಿಲ ಬಳಿ ಬಂದು ನಿಂತ. ಜೋಯಿಸರು "ಏನು ಆಗಲೆ ಸೌದೆ ಸೀಳಿ ಆಯ್ತೇನು ?" ಎಂದು ಸಿಡುಕಿದರು. ಇಲ್ಲಿ, ಕೊಡಲಿ ಎಲ್ಲಿದೆಯೊ ಗೊತ್ತಿಲ್ಲ' ಎಂದ ದುಖಿಗೆ ಕೊಡಲಿಯಿರುವ ಜಾಗ ಹೇಳಿದರು. ತರಗೆಲೆಯಷ್ಟು ಹಗುರವಾಗಿದ್ದ ಆ ಕೊಡಲಿ ಬಾಯಿಲ್ಲದೆ ಮೊಂಡವಾಗಿತ್ತು.

ಹಲ್ಲು ಕುಯ್ಯುವಷ್ಟು ಸುಲಭವಲ್ಲ ಸೌದೆ ಒಡೆಯುವ ಕೆಲಸ ಎನಿಸಿತು ದುಖಿಗೆ. ಮಧ್ಯಾಹ್ನದ ಸೆಕೆಗೆ ದುಖಿಯ ಮೈಯಿಂದ ಬೆವರು ಕೋಡಿ ಒಡೆದಂತೆ ಹರಿಯುತ್ತಿತ್ತು. ಒಣಗಿದ ಗಂಟಲೊಳಗೆ ಉಸಿರು ಸಿಕ್ಕಿದಂತಾಗಿ ಕುಸಿದು ಕುಳಿತ. ಕೈ ಊರಿ ಮೇಲೇಳಲು ಹೋದರೆ ಕೈಯ್ಯೆ ಬರಲಿಲ್ಲ; ಕಾಲುಗಳು ಸಣ್ಣಗೆ ತರಗುಡುತ್ತ ನಡುಗತೊಡಗಿದವು. ಒದ್ದಾಡಿಕೊಂಡೆ ಮೇಲೆದ್ದು ಕೊಡಲಿ ಕೈಗೆ ತೆಗೆದುಕೊಂಡ. ಒಂದು ದಮ್ಮು ಚಿಲುಮೆ ಎಳೆದರೆ ಕೈಕಾಲಿಗೆ ಪ್ರಾಣ ಕೊಡಿಕೊಳ್ಳುವುದೇನೋ ಎನಿಸಿತು ದುಖಿಗೆ. ಹಾದಿಯಲ್ಲಿ ಇವನತ್ತ ಬಂದ ಗೋಂಡನೊಬ್ಬ ಹಾಗೆ ದುಖಿ ಸೌದೆ ಸೀಳುವುದನ್ನು ನೋಡುತ್ತ ನಿಂತ. ಗೋಂಡ 'ಆ ಹಾರುವಯ್ಯ ನಿನಗೊಂದು ತುತ್ತು ಊಟ ಹಾಕಲಾಗಲಿಲ್ಲವೇನು' ಎಂದು ದುಖಿಗೆ ಕೇಳಿದ. 'ಆದರೆ ಬಾಯಿಬಿಟ್ಟು ಕೇಳೋದು ಹೇಗೆ' ದುಖಿಯ ಉತ್ತರ. ರೊಚ್ಚಿಗೆದ್ದ ಗೊಂಡ 'ಕೊಡ್ಲಿ ಅತ್ತ ಬಿಸಾಕಿ ನಿನ್ನ ಕೆಲಸ ನೋಡು ಹೋಗಿ' ಎಂದ. ದುಖಿ 'ಒಂಚೂರು ಚಿಲುಮೆ, ತಂಬಾಕು ಕೊಟ್ಟಿದ್ದರೆ ಅಗ್ತಿತ್ತಯ್ಯಾ' ಎಂದು ಕೇಳಿ ಅವನಿಂದ ಪಡೆದ.

ಮನೆಯ ಗೋಡೆಗೆ ಒರಗಿ ಕಾಯುತ್ತ ಕೂತ ಜೂರಿಯಾಳ ಕಣ್ಣು ಕುಗುರುತೊಡಗಿ ಹಾಗೇ ನಿದ್ದೆ ಹೋದಳು. ದನಿಯಾ ಮಾತ್ರ ಆಟದಲ್ಲಿ ಮೈಮರೆತಿದ್ದಳು.

ಕೈಯಲ್ಲಿ ಹೊಗೆಸೊಪ್ಪು, ಚಿಲುಮೆ ಹಿಡಿದು ದುಖಿ ಪಂಡಿತರ ಮನೆಯ ಬಾಗಿಲಿಗೆ ಬಂದು ಬೆಂಕಿ ಕೇಳಿದ. ಕೋಪ ಬಂದರೂ ತಡೆದುಕೊಂಡ ಪಂಡಿತರು ಹೆಂಡತಿಗೆ ಬೆಂಕಿ ಕೊಡು ಎಂತ ಹೇಳಿದರು. ಆದರೆ ಪಂಡಿತರ ಶ್ರೀಮತಿಗೆ ಸಿಟ್ಟು ತಡೆಯಲಾಗಲಿಲ್ಲ. ಒಳಗಿನಿಂದಲೇ ಚಮಾರನಿಗೆ ಕೇಳುವಂತೆ ಗಂಟಲೆತ್ತರಿಸಿ "ನಿಮ್ಗೇನು ಜಾತಿ, ಕುಲ, ಆಚಾರ ಮಡಿ ಏನೂ ಇಲ್ಲ. ಚಮಾರ, ಅಗಸ, ಹಜಾಮ ಯಾರಾದರೂ ಸರಿ ಈ ಮನೆಗೆ ಸಲೀಸಾಗಿ ನುಗ್ಗಬಹುದು. ಹಿಂದೂಗಳ ಮನೆಯಲ್ಲ ಇದು; ಛತ್ರ, ಛತ್ರ ಆಗಿಹೋಯ್ತು. ಅವನಿಗೆ ಆ ಕಡೆ ತೊಲಗಕ್ಕೆ ಹೇಳಿ ಇಲ್ಲಾ ಬೆಂಕೀನೆ ತೆಗೆದು ಅವನ ಮೂತಿ ಮೇಲೆ ಸುರಿಲೋ ! ಬೆಂಕಿ ತಾನೆ ಅವನಿಗೆ ಬೇಕಾಗಿರೋದು" ಎಂದು ಕೂಗಿಕೊಂಡರು ಶ್ರೀಮತಿಯವರು.

ಪಂಡಿತ ಘಾಶೀರಾಮ್ ಸ್ವಲ್ಪ ಹೊತ್ತು ಮಾತಾಡಲಿಲ್ಲ. "ಏನಾಯ್ತೀಗ, ಅವನೇನು ಹೊಸಿಲು ದಾಟಿ ಒಳಗೆ ಬಂದಿಲ್ಲ. ಇದರ ಮೇಲೆ ಭೂಮಿ ತಾಯಿಗೆ ಎಂಥ ಮೈಲಿಗೆ ? ಅವನೇನು ಯಾವುದನ್ನೂ ಮುಟ್ಟಿಲ್ಲ. ಬೆಂಕಿ ಕೊಡು, ಅವನು ಮಾಡ್ತಿರೋದು ನಮ್ಮ ಕೆಲಸ. ಬೇರೆಯವರಿಗಾಗಿದ್ರೆ ಆ ಕೆಲಸಕ್ಕೇ ನಾಲ್ಕಾಣೆ ದಂಡ ತೆರಬೇಕಾಗಿತ್ತು" ಎಂದು ಸಮಾಧಾನದ ಮಾತು ಹೇಳಿದರು ಪಂಡಿತರು.

ಒಳಗಿನಿಂದ ಕೆಂಡ ತಂದ ಪಂಡಿತರ ಶ್ರೀಮತಿಯವರು ದೂರದಲ್ಲೆ ನಿಂತು ಚಮಾರನ ಮೈ ಮೇಲೆ ಬೀಳುವಂತೆ ತೂರಿದರು.

ಆದರೆ ದುಖಿಗೆ ಇದರಿಂದ ಸೊಲ್ಪವೂ ಬೇಸರವಾಗಲಿಲ್ಲ. ಅದಕ್ಕಿಂತ ಹೆಚ್ಚಾಗಿ ತಾನು ಮಾಡಿದ್ದೇ ತಪ್ಪು ಎನಿಸಿತು ಅವನಿಗೆ. ಉತ್ತಮರ ಮನೆಯ ಸೂರಿನ ನೆರಳನ್ನೂ ಸೋಕಿಸಿಕೊಳ್ಳಬಾರದು. ತನ್ನಂತಹ ಕೀಳು ಕುಲದಲ್ಲಿ ಹುಟ್ಟಿದವರು. ಹಳ್ಳೀಲಿ ಹುಟ್ಟಿ ಬೆಳೆದರೂ ಬುದ್ಧಿ ಕಲಿಯದ ನನ್ನ ಯೋಗ್ಯತೆಗೆ ಮಣ್ಣುಬಿತ್ತು.

ಪಂಡಿತರ ಹೆಂಡತಿ ತನ್ನ ಮಾತಿನ ಮೇಲೆ ಚೆಲ್ಲಿದ ಕೆಂಡ ಪ್ರಸಾದವೇನೊ ಎಂಬಂತೆ ದುಖಿ ಅಡ್ಡಬಿದ್ದು "ನನ್ನ ತಪ್ಪು ಹೊಟ್ಟೆಗೆ ಹಾಕ್ಕಳವ್ವಾ, ಇದೆಲ್ಲಾ ತಿಳಿದಿದ್ರೆ ನಾನಾಕೆ ಚಮಾರನಾಗಿ ಹುಟ್ತಿದ್ದೆ" ಎಂದು ಬೇಡಿಕೊಂಡ.

ನೀರೂರಿದ ಚಮಾರನ ಕಣ್ಣುಗಳನ್ನು ಕಂಡ ಲಕ್ಷ್ಮಿಗೆ ಮನಸ್ಸಿನಲ್ಲೇನೇ ಅಳುಕಿದಂತಾಯಿತು. ಒಳಗೆ ಪಂಡಿತರ ಊಟ ಮುಗಿದು "ರೊಟ್ಟಿಯೇನಾದರೂ ಉಳಿದಿದ್ರೆ ಅವನಿಗಷ್ಟು ಹಾಕು" ಎಂದು ಹೆಂಡತಿಗೆ ಹೇಳಿದರು. "ಉಳಿದಿರೊ ಎರಡು ರೊಟ್ಟಿ ಯಾವ ಮೂಲೆಗೆ ಅವನಿಗೆ ?

(೧೦ನೇ ಪುಟಕ್ಕೆ)

## ಜಂಬಣ್ಣ ಅಮರಚಿಂತ

ಣ ನಿನ್ನ ಗುಣವಾಯಿತ್ತಲ್ಲೇ ||ಇಸ||
ದವರಿಗೆಲ್ಲ ನೀ ವರವ ಕೊಟ್ಟಿದ್ದಿ
ಟ್ಟಿ ಪರಓಟ್ಟಿ ಮಾಯದ ಫಲಕೊಟ್ಟಿ ||ಇಸ||
ಗಿ ಏರಿದ್ದಿ ಜಪ್ಪಂತ ಕುಂತಿದ್ದಿ
ೀತನಕ ನೀ ಗದ್ದಿಗಿ ಬಿಡನೆಂದಿ ||ಇಸ||
ತ್ರಿ ಮಂತ್ರಗಳ ಸೂತ್ರವ ಕೇಳಿದ್ದಿ
ಇಲ್ಲೇನಿ ಜೊಂಜೆಯಾಡಿಸಿದ್ದಿ ||ಇಸ||
ಕಿ ಹಾದರದಾಗ ಗಂಡು ಜೋಗ್ಯಾರಾಗಿ
ರ ದುಡಿಬಾರಿಸಿ ದಡ ಸೇರಿದರಲ್ಲೆ ||ಇಸ||
ಜೋನು ದುಡುದಾನ ತಿಂಜೋನು ತಿಂದಾನ
ಾಗ ನಿನ್ನಂಥ ರಾಜಕಿಕಿ ಇಲ್ಲೇ ||ಇಸ||
ಕಿ ಬರ್ತಾರೆ ಬಂಡೇನಿ ಬರ್ತಾರೆ
ನಿನ್ನ ಜಂಡು ಹಿಡಿದು ಚರಂಡಿಗೆ
ನೂಕೋರು ||ಇಸ||
ಬಿಟ್ಟ ಈ ಕತ್ಲ ಬಡಾಬಯಲ್ಲಿ ಆಗುತೈತೆ
ಹೈ ಏಸುದಿನ ಸೂರ್ಯನ ತಡೀತೈತೆ ||ಇಸ||

## ಸದ್ಗತಿ

[ಹಿಂದಿನ ಪುಟದಿಂದ]

ಈ ಜನವೊ ಬಕಾಸುರನ ಜಾತಿಯವರು. ಒಂದು ಸೇರು ಗೋಧಿ ಹಿಟ್ಟಾದರೂ ಒಬ್ಬನಿಗೇ ಸಾಲೋದಿಲ್ಲ; ಬಿಸಿಲಲ್ಲಿ ಮತ್ತೆ ಯಾರು ಬೆಂಕಿ ಸೆಕೇಲಿ ಬೇಯ್ತಾರೆ. ಸುಮ್ಮನೆ ಕೂರಿ" ಎಂದು ಶ್ರೀಮತಿಯವರು ಪಂಡಿತರ ಬಾಯಿ ಮುಚ್ಚಿಸಿದರು.

ಹೊರಗೆ ಕೂತು ಚಿಲುಮೆಯಿಂದ ಒಂದೆರಡು ಝುರಕಿ ಹೊಗೆ ಎಳೆದ ದುಖಿಗೆ ಕೈಕಾಲಿನಲ್ಲಿ ಜೀವಕೂಡಿಕೊಂಡಂತಾಯಿತು. ಎಷ್ಟು ಹೆಣಗಿದರೂ ಜಗ್ಗದ ಕೊರಡನ್ನು ಮತ್ತೆ ಸೀಳತೊಡಗಿದ. ಹಜಾರದಲ್ಲಿ ಮೈಚೆಲ್ಲಿ ಪಂಡಿತರು ಹಾಗೇ ನಿದ್ದೆ ಹೋದರು. ಎಷ್ಟೇ ಮೈಬಲ ಬಿಟ್ಟು ಕೊಡಲಿ ಬೀಸಿದರೂ ಕಲ್ಲಿನಂತಿದ್ದ ಕೊಂಟು ಅಲ್ಲಾಡುತ್ತಿರಲಿಲ್ಲ. ದುಖಿಗೆ ಬರಬಾರದ ಕೋಪ ಬಂದು ಕೈಯಲ್ಲಿದ್ದ ಕೊಡಲಿಯನ್ನೆ ತೂದಸೆದು ಬಿಟ್ಟ. ಸ್ವಲ್ಪ ಹೆಚ್ಚು ಸಡಿಮೆಯಾಗಿದ್ದರೆ ದಾರಿಯಲ್ಲಿ ಬರುತ್ತಿದ್ದ ಬ್ರಾಹ್ಮಣನಿಗೇ ಬಡೆಯುತ್ತಿತ್ತು ದುಖಿ ಬೀಸಿದ ಕೊಡಲಿ. ಅದೇಗೆ ತನಗಿಷ್ಟು ಸಿಟ್ಟುಬಂತೆಂದು ದುಖಿಗೆ ಗಾಬರಿಯಾಯಿತು; ತಪ್ಪಾಯ್ತೆಂದು ಬ್ರಾಹ್ಮಣನಿಗೆ ಗೋಗರೆದ. ಇವನಿಗಲ್ಲೊ ಹುಚ್ಚೊ, ಬೆಪ್ಪೊ ಇರಬಹುದೆಂದು ಬ್ರಾಹ್ಮಣ ತನ್ನ ಹಾದಿ ಹಿಡಿದು ಹೊರಟ.

ಹಸಿವಿನಿಂದ ಮೊದಲೆ ದಣಿದಿದ್ದ ದುಖಿಯ ಕಣ್ಣಲ್ಲಿ ಬಳಬಳನೆ ನೀರುಕ್ಕಿ ನೆಲಕ್ಕೆ ಕುಸಿದವನು ಹಾಗೆ ಬಿಕ್ಕತೊಡಗಿದ. ಅಳುತ್ತಿದ್ದವನಿಗೆ ಮಂಕುಕವಿದಂತಾಗಿ ನಿದ್ದೆ ಬಂತು. ಮಧ್ಯಾಹ್ನದ ನಿದ್ದೆಮುಗಿಸಿದ ಪಂಡಿತರು ಮುಖಕ್ಕೆ ನೀರು ಹಾಕಿಕೊಂಡು ಹೊರಗೆ ಬಂದು ನೋಡುತ್ತಾರೆ! ಚಮಾರ ಮೈಮೇಲೆ ಎಚ್ಚರವಿಲ್ಲದೆ ನಿದ್ದೆ ಹೊಡೀತಿದ್ದಾನೆ; ಮರದ ಕೊಂಟು ಹಂಗಿತ್ತೊ ಹಾಗೆ ಇದೆ. ನಿದ್ದೆಯಲ್ಲಿದ್ದ ದುಖಿ ತಡಬಡಾಯಿಸಿಕೊಂಡು ಏಳುವಂತೆ ಜೋರಾಗಿ ಕಿರುಚಿಕೊಂಡ ಪಂಡಿತರು. ದುಖಿಗೆ ಛೀಮಾರಿ ಹಾಕಿ ಸೌದೆ ಒಡೆಯುವಂತೆ ಹೇಳಿದರು.

ದುಖಿಯ ಮೈಯಲ್ಲೀಗ ಆವೇಶ ಹುಚ್ಚು ಹೊಳೆಯಾಗಿ ಹರಿಯತೊಡಗಿತು. ಈ ಗಂಟಲು ಮರವನ್ನು ಒಡೆಯೋದಲ್ಲ ಪುಡಿಪುಡಿಯೇ ಳಿಸಬೇಕು. ಕೊಡಲಿಯ ಒಂದೊಂದು ಹೊಡೆತವೂ ರುಮ್ಮೆಂದು ಬಿರುಸಾಗಿ ಬೀಳುತ್ತಿತ್ತು. ಪಂಡಿತ ಘಾಶೀರಾವ್ ಕುಂಡಿಯ ಮೇಲೆ ಕೈಯಿಟ್ಟುಕೊಂಡು 'ಹ್ಞಾ! ಹಂಗೆ. ಅಲ್ಲಿ. ಇಲ್ಲ. ಇನ್ನೂ ಜೋರಾಗಿ' ಎಂದು ಸ್ವಲ್ಪಹೊತ್ತು ಸೂಚನೆ ಕೊಟ್ಟು ನಂತರ ಮತ್ತೆ ಸ್ನಾನಕ್ಕೆ ಹೋದರು. ದುಖಿಗೆ ಮೈಮೇಲೆ ಪ್ರಜ್ಞೆ ಇರಲಿಲ್ಲ. ತನ್ನ ಸುಸ್ತು, ಸಂಕಟ, ಹಸಿವು, ಜ್ವರದ ತಾಪ, ಎಲ್ಲವನ್ನೂ ಒಟ್ಟಿಗೆ ಸೇರಿಸಿ ಮರದ ತುಂಡಿನ ಮೇಲೆ ಸೇಡು ತೀರಿಸಿಕೊಳ್ಳುತ್ತಿದ್ದ. ಅರ್ಧ ಗಂಟೆಯೊಳಗೆ ಮರದ ಕೊಂಟು ಸಣ್ಣ ಸಣ್ಣ ಸೀಳುಗಳಾಗಿತ್ತು. ದುಖಿಗೆ ಗಿರ್ರನೆ ತಲೆ ಸುತ್ತಿದಂತಾಗಿ ಅವನ ಕೈಯಿಂದ ಕೊಡಲಿ ಜಾರಿ ಕೆಳಗೆ ಬಿತ್ತು.

ದುಖಿ ನೆಲಕ್ಕೆ ದಿಂಡುರುಳಿದ, ಹೆಣವಾಗಿ. ಆಗತಾನೆ ಸ್ಕೂಲಿನಿಂದ ಮನೆಗೆ ಬರುತ್ತಿದ್ದ ಪಂಡಿತರ ಮಗ ಸಾವಿನೊಡನೆ ಸೆಣಸಾಡುತ್ತಿದ್ದ ದುಖಿಯನ್ನು ಬಿರುಗಣ್ಣಿನಿಂದ ನೋಡುತ್ತಿದ್ದ ಭಯದಿಂದ ಒಳಗೆ ಓಡಿದ ಹುಡುಗ 'ಅಯ್ಯೊ, ಚಮಾರ ಸತ್ತೋದ' ಎಂದು ಕೂಗಿಕೊಂಡಿತು. ಮಗನ ಮಾತನ್ನು ನಂಬದ ಪಂಡಿತ ಘಾಶೀರಾವ್ ಮನೆಬಾಗಿಲಿನಿಂದ ಹಣಿಕಿದರು; ದುಖಿಯ ಹೆಣವನ್ನೇ ರೆಪ್ಪೆಯಲ್ಲಾಡಿಸದೆ ನೋಡುತ್ತಾ ನಿಂತ. ಗೋಡೆ ಅಲ್ಲಿದ್ದ ಪಂಡಿತ ಘಾಶೀರಾಮನ ಮುಖ ಅಪನುಟ್ಟಿದ್ದ ಪಂಚೆಯಷ್ಟೆ ಬೆಳ್ಳಗೆ ಬಿಳಿಚಿಕೊಂಡಿತು. ಪಂಡಿತರ ಹೆಂಡತಿ ಲಕ್ಷ್ಮಿ ಗಂಡನಂತೆ ಸ್ವಲ್ಪವೂ ಗಲಿಬಿಲಿಗೊಳ್ಳಲಿಲ್ಲ. ಆಕೆ 'ಇನ್ನೇನು! ಯಾರಾದ್ರೂ ಚಮಾರರನ್ನು ಕರೆಸಿ ಹೆಣ ತೆಗೆದುಕೊಂಡು ಹೋಗಲಿ'ಎಂದು ತಣ್ಣಗೆ ಅಂದಳು. ಘಾಶೀರಾವ್ ತೊದಲುತ್ತಾ 'ಬೆ........ಬೆಬ್ಬೆ' ಎಂದು ಗೊಣಗುತ್ತಿದ್ದ. ಲಕ್ಷ್ಮಿ ಮಾತ್ರ "ನೀವ್ಯಾಕೆ ಹಿಂಗಾಡ್ತೀರಿ? ಸೌದೆ ಒಡೀತಿದ್ದ, ಸತ್ತ. ಏನು ಕಾಯಿಲೆ ಇತ್ತೊ! ಎಷ್ಟು ಜನ ಮಲಗಿದ್ದಾಗಲೇ ಸಾಯಲ್ಲ? ಅವನು ಸಾಯ್ತಾನೆ ಅಂತ ನಿಮಗೇನು ಕನಸು ಬಿದ್ದಿರಲಿಲ್ಲ. ಅವನ ಸಾವಿಗೆ ನೀವು ಹೊಣೆಯಾ!" ಎಂದು ನಾಜೂಕಾಗಿ ಸಮಸ್ಯೆಗೆ ಪರಿಹಾರ ಹೇಳಿದಳು. ಆಹಾ! ಎಷ್ಟೇ ಆದ್ರೂ ಬ್ರಾಹ್ಮಣ ತಲೆ. ಯಾವ ಕೆಲಸವೂ ಕಡ್ಡಿ ಎರಡು ತುಂಡು ಮಾಡಿದಹಾಗೆ. ಆದರೆ ಈಗ ಹೊಸ ಸಮಸ್ಯೆ ಹುಟ್ಟಿಕೊಂಡಿತು. ದುಖಿಯ ಸಾವಿನ ಸುದ್ದಿ ತಿಳಿದ ಚಮಾರರೆಲ್ಲಾ ಪಂಡಿತರ ಮನೆಯ ಮುಂದೆ ಗುಂಪಾಗಿ ನಿಂತರೆ ಹೊರತು ಹೆಣ ಎತ್ತುವುದಕ್ಕೆ ಒಬ್ಬರೂ ಮುಂದಾಗಲಿಲ್ಲ. ಹಾಳಾಗಲಿ ಎಂದರೆ, ಬ್ರಾಹ್ಮಣರ ಕೇರಿಯ ನಡು ರಸ್ತೆಯಲ್ಲಿ ಹೆಣ ಬಿದ್ದಿದೆ. ಅಲ್ಲಿಂದ ಅದನ್ನು ತೆಗೆಯುವ ತನಕ ಬ್ರಾಹ್ಮಣರಾರೂ ಓಡಾಡುವಂತಿಲ್ಲ; ಬಾವಿಗೆ ಹೋಗಿ ನೀರೂ ತರುವಂತಿಲ್ಲ.

ನಡೆದ ಕಥೆಯನ್ನೆಲ್ಲ ಗೊಂಡ, ಚಮಾರರ ಕೇರಿಯಲ್ಲಿ ಸಾರಿಬಿಟ್ಟಿದ್ದ. ಆದರ ಜ
'ಇದು ಪೋಲೀಸು ಕೇಸು. ಹೆಣ ಎ
ನಿಮಗೇ ಗ್ರಾಚಾರ' ಎಂದು ಭಯ ಹುಟ್ಟಿ

ಜೂರಿಯಾ.ದನಿಯಾರ ಪಾಲಿನ ಕರಾಳ
ಗಳು ಇವು; ಈ ದೇಶದ ಕರುಣೆ, ಪ್ರ
ವಿಶ್ವಾಸ, ಮಮತೆ ಎಲ್ಲವುಗಳಿಂದ ಅ
ವಂಚಿತರಾಗಿದ್ದರು. ಮಾತಿಗೆ ದಕ್ಕದ ದು
ನೋವುಗಳು ಮಾತ್ರ ಈಗ ಅವರ ಪ
ಉಳಿದಿರುವ ಆಸ್ತಿ. ಜೂರಿಯಾ "ನನ್ನ
ಹೀಗೆ ಸಾಯೋದಕ್ಕೆ ನಿಮಗೆ ಮಾ
ಅನ್ಯಾಯ ಏನು ಪಂಡಿತರೆ?" ಎಂದ
ಅಳಲೂ ಬಾಯಿಬರದೆ, ದಿಕ್ಕುತೋಚದೆ ಕ
ಲಾಗಿದ್ದಳು. ಈಗ ಹೆಣವನ್ನಾರೂ ಕದ
ಮಾತಿರಲಿಲ್ಲ.

ದುಖಿಯಾನ ಶವ ಅನಾಥವಾಗಿ ಬಿದ್ದಿ
ಕೊನೆಗೂ ಯಾರಾದರೂ ಚಮಾರರು ಶವ
ಬಹುದೆಂದು ಕಾದಿದ್ದ ಪಂಡಿತ ಘಾಶೀರಾವ
ನಿರಾಶೆಯಾಯಿತು. ಏನಾದರೊಂದು ಪರಿ
ಕ್ಕಾಗಿ ಕಾತರಿಸುತ್ತಿದ್ದ ಪಂಡಿತರ ಬ್ರಾ
ತಲೆಗೆ ಉಪಾಯವೊಂದು ಹೊಳೆಯಿತು! ಅ
ದ ಮೇಲಿಂದ ಒಂದು ಹಗ್ಗ ತಂದು ಅ
ಒಂದು ತುದಿಗೆ ಸುಲಭವಾಗಿ ಊರು
ಕುಣಿಕೆ ಹಾಕಿದರು. ಶವದ ಪಕ್ಕದಲ್ಲೆ ಬಿದ್ದಿ
ಕೊಡಲಿಯ ಕಾವಿನಿಂದ ಹಗ್ಗದ ಕುಣಿಕೆಯ
ಶವದ ಕಾಲಿಗೆ ತೊಡಿಸಿ ಬಲವಾಗಿ ಎಳೆದ
ಪಂಡಿತರು ಒಂದು ಕೈಯ್ಯಿಂದ ಮೂಗುಮು
ಇನ್ನೊಂದು ಕೈಯ್ಯಿಂದ ಹಗ್ಗದ ಇನ್ನೊ
ತುದಿ ಹಿಡಿದು ಜಗ್ಗಿದರು. ಎಂದೂ
ಮುರಿದು ದುಡಿಯದ ಪಂಡಿತರಿಗೆ ಹೆಣ
ಯುವುದು ತ್ರಾಸಿನದೆನಿಸಿತು. ಆದರೂ
ಯಿಲ್ಲದೆ, ಕಲ್ಲುಮುಳ್ಳಿನ ಮೇಲೆ. ಕೆಸರು ಕೊ
ಯ ಮೇಲೆ ದುಖಿಯಾನ ಹೆಣವನ್ನು ದರ
ಊರಾಚೆಯ ಮುಳ್ಳುಬೇಲಿಯ ಸಾಲಿನ
ಎಳೆದುಕೊಂಡು ಹೋಗಿ ಒಗೆದರು. ಅಲ್ಲಿ
ವರೆಗೆ ಬಂದವರೆ ಪಂಡಿತರು ಇನ್ನೊಮ್ಮೆ
ಮಾಡಬೇಕಾಯಿತು. ಅವರ ಹಣೆಯ ಮೇ
ದಾಗಿಟ್ಟುಕೊಂಡ ಗಂಧದ ತಿಲಕ ಕ
ಬಿಡುವಂತೆ ಕಾಣುತ್ತಿತ್ತು. ಮಂತ್ರ
ಪಠಿಸುತ್ತಾ ಚೊಂಬಿನಿಂದ ನೀರು ತೆ
ದುಖಿಯಾ ಸತ್ತುಬಿದ್ದಿದ್ದ ಜಾಗದಲ್ಲಿ ಚಿಮು
ನೆಲವನ್ನು ಶುದ್ಧಿಮಾಡಿದರು.

ಮೇಲೆ ನೀಲಗಗನದಲ್ಲಿ ವರ್ತುಲಾಕಾರ
ಸುತ್ತುತ್ತಿರುವ ರಣಹದ್ದುಗಳಿಗೆ ಇನ
ಆಹಾರವಾಗಲಿರುವ ದುಖಿಯಾನ ಹೆಣ ಮ
ಅಡಿಯಾಗಿ ನೆಲಕಚ್ಚಿ ಮಲಗಿತ್ತು.

# ರಂಗನಾಯಕಮ್ಮ ಅವರ ರಾಮಾಯಣ ವಿಷವೃಕ್ಷ

ತೆಲುಗಿನ ಅತ್ಯಂತ ಜನಪ್ರಿಯ ಕಾದಂಬರಿಕಾರರಲ್ಲಿ ಒಬ್ಬರಾದ ರಂಗನಾಯಕಮ್ಮ, ರಾಮಾಯಣ ವಿಷವೃಕ್ಷವೆಂಬ ಬೃಹದಾಕಾರದ ಕೃತಿಯ ಮೂಲಕ ಅನೇಕರ ಪೊಗಳಿಕೆಗೂ, ತೆಗಳಿಕೆಗೂ ಪಾತ್ರರಾಗಿದ್ದಾರೆ. ಈ ಕೃತಿಯು ಮೂರು ಸಂಪುಟಗಳಲ್ಲಿ ಒಟ್ಟು ೧೫೨೦ ಪುಟಗಳ ಕಥಾಭಾಗ, ೫೦೦ ಪುಟಗಳ ಪೀಠಿಕೆಗಳು ಮತ್ತು ವಿಮರ್ಶೆ ಇವೆ. ರಾಮಾಯಣದ ಕಥೆಯನ್ನು ಕೆಲವು ಮುಖ್ಯ ಘಟನೆಗಳನ್ನೊಳಗೊಂಡ ಕಥೆಗಳಾಗಿ ವಿಂಗಡಿಸಿ, ಬೇಕಾದ ಕಡೆಗಳಲ್ಲಿ ಅಡಿಟಿಪ್ಪಣಿಗಳನ್ನು, ವಿವರಣೆಯನ್ನು ಸೇರಿಸಿ ರಂಗನಾಯಕಮ್ಮ ಈ ಕೃತಿಯನ್ನು ರಚಿಸಿದ್ದಾರೆ. ಇದೊಂದು ಮಹತ್ಸಾಧನೆ ಎಂದರೆ ತಪ್ಪಿಲ್ಲ.

ತೆಲುಗಿನಲ್ಲಿ ರಾಮಾಯಣಗಳಿಗೆ ಲೆಕ್ಕವಿಲ್ಲ. ಆಧುನಿಕ ಕಾಲದಲ್ಲೇ ಬಹುಶಃ ನೂರಕ್ಕಿಂತ ಹೆಚ್ಚು ರಾಮಾಯಣಗಳು ರಚಿತವಾಗಿವೆ. ವಿಶ್ವನಾಥಸತ್ಯನಾರಾಯಣ ಅವರು ಬರೆದ ಶ್ರೀಮದ್ರಾಮಾಯಣ ಕಲ್ಪವೃಕ್ಷವೆಂಬ ಮಹಾಕಾವ್ಯ ಜ್ಞಾನಪೀಠ ಪ್ರಶಸ್ತಿಯನ್ನು ಗಳಿಸಿತು. ರಾಮಾಯಣವೊಂದು ಕಲ್ಪವೃಕ್ಷವೆಂಬ ಅಭಿಪ್ರಾಯ ಬೇರೂರಿರುವ ವಿಶ್ವನಾಥರಂಥಹ ಸಂಪ್ರದಾಯವಾದಿಗಳನ್ನು ಧೈರ್ಯದಿಂದ ಎದುರಿಸಿ ರಾಮಾಯಣಸಂಸ್ಕೃತಿ ನಮ್ಮ ಸಮಾಜಕ್ಕೆ ವಿಷವೃಕ್ಷವೆಂದು ರಂಗನಾಯಕಮ್ಮ ಸಾರಿದ್ದಾರೆ. ಈ ಲೇಖಿಕೆಯ ಬಂಡಾಯ ಪ್ರವೃತ್ತಿಯಿಂದ ನಮ್ಮ ಮಹಿಳೆಯರು ಕಲಿಯಬೇಕಾದ್ದು ಬಹಳಷ್ಟಿದೆ.

ವಾಲ್ಮೀಕಿ ರಾಮಾಯಣದಿಂದ ಜನಪದ ರಾಮಾಯಣದವರೆಗೆ ಭಾರತದಲ್ಲಿ ಹರಡಿರುವ ರಾಮಕಥಾ ಪ್ರಪಂಚ ಬೀರಿರುವ ಪ್ರಭಾವ ಅಪಾರವಾದುದು. ರಾಮಾಯಣ ಮಾನವೀಯ ಮೌಲ್ಯಗಳನ್ನು ಸಾರುವ ಮಹತ್ತರ ಕೃತಿ ಎಂದು ಪ್ರಚಾರ ನಡೆದಿದೆ; ನಡೆಯುತ್ತಿದೆ. ಆದರೆ ಕೆಲವು ಶತಮಾನಗಳ ಹಿಂದಿನ ಸಮಾಜದ ಪ್ರತಿಬಿಂಬವಾಗಿ ರಾಮಾಯಣವನ್ನು ವೈಜ್ಞಾನಿಕವಾಗಿ ಪರಿಶೀಲಿಸಿದವರು ಕಡಿಮೆ. ರಾಮಾಯಣದಲ್ಲಿ ಇಂದಿನ ಸಮಾಜಕ್ಕೆ ಬೇಕಾದ್ದು ಏನಿದೆ ಎಂಬ ಪರಿಶೀಲನೆಗಿಂತ, ಅದನ್ನು ಪವಿತ್ರ ಗ್ರಂಥವೆಂದು ಭಾವಿಸಿ ಪೂಜಿಸುವವರೇ ಹೆಚ್ಚು. ಈ ಹಿನ್ನೆಲೆಯಲ್ಲಿ ನೋಡಿದಾಗ ರಾಮಾಯಣ ವಿಷವೃಕ್ಷ ಒಂದು ಮಹತ್ವದ ಕೃತಿ ಎನ್ನಬಹುದು.

ರಾಮಾಯಣದ ದಶರಥ, ರಾಮ, ರಾವಣ ಮೊದಲಾದ ಅರಸರು ಸಾಮ್ರಾಜ್ಯಶಾಹಿ ಮೌಲ್ಯಗಳನ್ನು ಕಾಪಾಡಿದವರು. ರಾಮರಾಜ್ಯ ಆದರ್ಶವಂತ ಆಡಳಿತ ಎಂಬುದು ಸುಳ್ಳು ಪ್ರಚಾರ. ರಾಮಾಯಣ ಕಾಲದಲ್ಲಿ ಹೆಂಗಸರು ಅಸ್ವತಂತ್ರರಾಗಿ, ಗಂಡಸರ ದಬ್ಬಾಳಿಕೆಗೆ ಒಳಗಾಗಿ, ಜೀವಚ್ಛವಗಳಂತೆ ಬಾಳು ನಡೆಸುತ್ತಿದ್ದರು. ಕವಿಯಾಗಿ ವಾಲ್ಮೀಕಿಗೆ ಮಹತ್ವದ ಸ್ಥಾನವಿದ್ದರೂ, ಅವನು ಪ್ರತಿನಿಧಿಸುವ ವರ್ಗ ಸಮಾಜ ದ್ರೋಹಿಗಳದೇ ಆಗಿರುವುದರಿಂದ, ರಾಮಾಯಣ ನಮ್ಮ ಪಾಲಿಗೊಂದು ವಿಷವೃಕ್ಷವೇ ಆಗಿದೆ. ಈ ಕೆಲವು ವಿಷಯಗಳನ್ನು ರಂಗನಾಯಕಮ್ಮ ತಮ್ಮ ಕಥೆಗಳ ಮೂಲಕ ಪರಿಣಾಮಕಾರಿಯಾಗಿ ನಿರೂಪಿಸಿದ್ದಾರೆ.

ರಂಗನಾಯಕಮ್ಮ ತಮ್ಮ ಕೃತಿಯಲ್ಲಿ ಹೊಸದಾಗಿ ಮಾಡಿದ್ದಾದರೂ ಏನಿದೆ ಎಂಬ ಪ್ರಶ್ನೆ ಏಳುತ್ತದೆ. ಅವರು ವಿಷವೃಕ್ಷದಲ್ಲಿ ಅನುಸರಿಸಿದ ವಿಧಾನ ಹೀಗಿದೆ: (೧) ವಾಲ್ಮೀಕಿ ತನ್ನ ರಾಮಾಯಣದಲ್ಲಿ ಹೇಳಬೇಕಾಗಿದ್ದೂ ಹೇಳದಿರುವ ವಿಷಯಗಳನ್ನು ಹೇಳುವುದು. (೨) ವಾಲ್ಮೀಕಿಗೆ ಇಷ್ಟವಿಲ್ಲದೆ ಬಿಟ್ಟ ವಿಷಯಗಳು. (೩) ಹೇಳಿದರೂ ಸತ್ಯಾಂಶವನ್ನು ಮುಚ್ಚಿಟ್ಟು ಭ್ರಮೆಯನ್ನುಂಟುಮಾಡಿದ ಸಂದರ್ಭಗಳು. (೪) ಸ್ಪಷ್ಟವಾಗಿ ಹೇಳಿದ ಸಂದರ್ಭಗಳು ಯಾವ ಹಿನ್ನೆಲೆಯಲ್ಲಿ ಮೂಡಿಬಂದಿವೆ ಎಂಬುದನ್ನು ವಿವರಿಸುವುದು.

ಇಂಥ ಕೆಲವು ಘಟನೆಗಳನ್ನು ನೋಡೋಣ. ದನಗಳನ್ನೂ ಸವಿವರವಾಗಿ ವರ್ಣಿಸಿದ ವಾಲ್ಮೀಕಿ ಊರ್ಮಿಳೆಯ ವಿಷಯವನ್ನೇ ಹೇಳುವುದಿಲ್ಲ. ಲಕ್ಷ್ಮಣನ ಜೊತೆಗೆ ಕಾಡಿಗೆ ಹೋಗದ ಊರ್ಮಿಳೆ ಪತಿವ್ರತೆ ಅಲ್ಲ ಎಂದು ವಾಲ್ಮೀಕಿಯ ಭಾವನೆಯಿರಬಹುದು. ಆದರೆ ರಂಗನಾಯಕಮ್ಮ ಊರ್ಮಿಳೆ ಲಕ್ಷ್ಮಣನ ಬಗ್ಗೆ ಅನಾಸಕ್ತೆಯಾಗಿದ್ದಳೆಂದು ಚಿತ್ರಿಸಿದರು. ದಶರಥನು ಕೊಟ್ಟ ದೊಡ್ಡ ಮೂಟೆಯಷ್ಟಿದ್ದ ಒಡವೆಗಳು, ಸೀರೆಗಳು, ಆಯುಧಗಳು ಗುಹನ ರಾಜ್ಯದವರೆಗೆ ರಥದ ಮೇಲೆ ಬಂದವು. ಆಮೇಲೆ ಅವನ್ನು ಹೊತ್ತವರು ಯಾರೆಂದು ವಾಲ್ಮೀಕಿ ಹೇಳುವುದಿಲ್ಲ. ಗುಲಾಮನಾದ ಲಕ್ಷ್ಮಣನೇ ಆ ದೊಡ್ಡ ಮೂಟೆಯನ್ನು ಹೊತ್ತುಕೊಂಡು ಬಂದಿರಬೇಕು. ರಾಮಾಯಣದ ರಾಕ್ಷಸರನ್ನು ಕಾಡುಮನುಷ್ಯರಾಗಿ ರಂಗನಾಯಕಮ್ಮ ಚಿತ್ರಿಸಿದ್ದಾರೆ. ಶೂರ್ಪಣಖಿಯ ಬಗ್ಗೆ ರಂಗನಾಯಕಮ್ಮರ ಕಲ್ಪನೆ ಗಣನೀಯವಾದ್ದು. ತನ್ನನ್ನು ಪ್ರೀತಿಸಿದ ಶೂರ್ಪಣಖಿಯ ಮೇಲೆ ಇಷ್ಟವಾದರೂ, ರಾಮ ಏಕಪತ್ನೀವ್ರತದ ಜಂಬದಿಂದ ಆಕೆಯನ್ನು ತಿರಸ್ಕರಿಸುತ್ತಾನೆ. ತಾನು ಅನುಭವಿಸಲಾಗದ ಅಂದ ಆಕೆಗೆ ಏಕಿರಬೇಕೆಂದು ಭಾವಿಸಿ, ಲಕ್ಷ್ಮಣನಿಗೆ ಶೂರ್ಪಣಖಿಯನ್ನು ವಿರೂಪಗೊಳಿಸಬೇಕೆಂದು ಆಜ್ಞೆ ನೀಡುತ್ತಾನೆ. ಭರತನಿಗೆ ದಶರಥನ ವರದಿಂದ ನ್ಯಾಯವಾಗಿ ರಾಜ್ಯ ದಕ್ಕಬೇಕಾಗಿತ್ತು. ದಶರಥ ರಾಮನ ಮೇಲೆ ತನ್ನ ಮೋಹದಿಂದ ಬೇಕೆಂದೇ ಭರತನನ್ನು ಮಾವನ ಮನೆಗೆ ಕಳುಹಿಸಿ, ದೊಡ್ಡ ಮಗನೊಂದಿಗೆ ಸೇರಿ ಒಳಸಂಚು ನಡೆಸಿ, ಅಭಿಷೇಕದ ಮುಹೂರ್ತ ನಿರ್ಣಯಿಸಿದುದಾಗಿ ರಂಗನಾಯಕಮ್ಮ ಅವರ ಕಲ್ಪನೆ.

ಡಾ|| ಆರ್ವಿಯಸ್ ಸುಂದರಂ

ರಾಮನ ಪಿತೃಭಕ್ತಿ, ಸತ್ಯವ್ರತ, ಏಕಪತ್ನೀವ್ರತ, ಋಜುತ್ವ, ವೀರಗುಣ, ದೈವತ್ವ–ಎಲ್ಲವೂ ಸುಳ್ಳೆಂಬುದನ್ನು ಸಕಾರಣವಾಗಿ ಪ್ರತಿಪಾದಿಸುತ್ತಾರೆ ರಂಗನಾಯಕಮ್ಮ. ಬಾಲ್ಯದಲ್ಲಿ ರಾಮನಿಗೂ ಸ್ವಲ್ಪಮಟ್ಟಿಗೆ ಚೈತನ್ಯವೂ, ಪ್ರಶ್ನಿಸುವ ಗುಣವೂ ಇತ್ತು. ಆದರೆ ದಶರಥ, ಪುರೋಹಿತರು, ವಿಶ್ವಾಮಿತ್ರಾದಿ ಋಷಿಗಳು ಅವನ ನೈಜಗುಣವನ್ನು ಕೊಂದು, ಜನ ವಿರೋಧಿ ಭಾವವನ್ನು ಬೆಳೆಸಿಕೊಳ್ಳಲು ಹೇಗೆ ಕಾರಣರಾದರೆಂಬುದನ್ನು ವಿಷವೃಕ್ಷದಲ್ಲಿ ಸವಿವರವಾಗಿ ಹೇಳಲಾಗಿದೆ. ರಾಮನಿಗೆ ರಾಜ್ಯಕೊಡುವ ವಿಷಯ ತಿಳಿದು ಕೈಕೇಯಿ ಮಾತನಾಡುವುದಿಲ್ಲ. ಆಗ ದಶರಥ ಹೀಗೆನ್ನುತ್ತಾನೆ: "ಕೈಕೇಯಿ! ಏಕೆ ದುಃಖಿಸುತ್ತೀಯೆ. ನೀನು ಏನು ಬಯಸಿದರೆ ಅದನ್ನು ಕೊಡುವೆ. ಯಾರನ್ನಾದರೂ ಕೊಲ್ಲಬೇಕೆ? ಆತ ಎಂಥ ನಿರ್ದೋಷಿಯಾದರೂ ನಿನ್ನ ಸಂತೋಷಕ್ಕಾಗಿ ಕೊಲ್ಲುತ್ತೇನೆ. ಯಾರನ್ನಾದರೂ ಕಾಪಾಡಬೇಕೆ. ಹೇಳು. ಆತ ದೋಷಿಯಾದರೂ ಕಾಪಾಡುತ್ತೇನೆ. ಹಣವಂತನನ್ನು ಬಡವನನ್ನಾಗಿಸಬೇಕೆ? ಬಡವನನ್ನು ಐಶ್ವರ್ಯವಂತ ಮಾಡಬೇಕೆ? ......." ಇಂಥ ದಶರಥನನ್ನೇ ಆದರ್ಶವಂತ ಅರಸನೆಂದು ಕವಿ ವಾಲ್ಮೀಕಿ ವರ್ಣಿಸುತ್ತಾನೆ. ಆ ರಾಜನ ಕೀರ್ತಿ ದಶದಿಶೆಗಳಲ್ಲಿ ವ್ಯಾಪಿಸಿದೆ ಎನ್ನುತ್ತಾನೆ. ಜನ ನಂಬುತ್ತಾರೆ. ಭರತನು ದಶರಥನ ಸಾವಿನ ಸುದ್ದಿಯನ್ನು ಹೇಳಿದ ಕೂಡಲೇ ಶ್ರೀರಾಮ ಅವನಿಗೆ ರಾಜ್ಯಭಾರವನ್ನು ಕುರಿತಂತೆ ನೂರಾರು ಶ್ಲೋಕಗಳಲ್ಲಿ ಬೋಧೆಗೆ ತೊಡಗುತ್ತಾನೆ. ಇಂಥ ಅಸಂದರ್ಭ ಘಟನೆಗಳನ್ನು ಪ್ರಕ್ಷಿಪ್ತಗಳೆಂದು ಒಂದೇ ಮಾತಿನಿಂದ ತಳ್ಳಿಹಾಕುವ ವಿಮರ್ಶಕರ ಬಗ್ಗೆ ಎಚ್ಚರಿಕೆ ವಹಿಸಬೇಕಾದ ವಿಷಯವನ್ನು ರಂಗನಾಯಕಮ್ಮ ಒತ್ತಿಹೇಳುತ್ತಾರೆ.

ವಿಷವೃಕ್ಷದಲ್ಲಿ ಗಮನಿಸಬೇಕಾದ ಇನ್ನೊಂದು ಅಂಶವಿದೆ. ರಾಮನು ಆರ್ಯನೆಂದೂ ರಾವ

[13ನೇ ಪುಟಕ್ಕೆ]

# ಹರಿಯಾಣ : ಗಣಿ ಕಾರ್ಮಿಕರ ಹೋರಾಟ

ಅತ್ಯಂತ ಸುವ್ಯವಸ್ಥಿತವಾದ ರೀತಿಯಲ್ಲಿ ಕ್ರೂರವಾಗಿ ಶೋಷಣೆಗೀಡಾಗಿರುವವರಲ್ಲಿ ಗಣಿ ಕೆಲಸಗಾರರೂ ಸೇರಿದ್ದಾರೆ. ಉತ್ತರ ಭಾರತದ ರಾಜ್ಯಗಳಲ್ಲಿ ವಿಶೇಷವಾಗಿ ಬಿಹಾರ, ಉತ್ತರ ಪ್ರದೇಶ ಮತ್ತು ಹರಿಯಾಣ ರಾಜ್ಯಗಳಲ್ಲಿ ಈ ಗಣಿ ಕಾರ್ಮಿಕರ ಬದುಕು ಅಸಹನೀಯವಾಗಿದೆ. ಗಣಿಗಳಲ್ಲಿಂದ ಕಲ್ಲುಗಳನ್ನು ತೆಗೆಯುವುದು, ಗಣಿ ಅಗೆಯುವುದು ಹಾಗೂ ಕಲ್ಲುಗಳ ಸಾಗಾಣಿಕೆಯಲ್ಲಿ ತೊಡಗುವುದು ಈ ಗಣಿ ಕಾರ್ಮಿಕರ ಮುಖ್ಯ ಕೆಲಸವಾಗಿದೆ.

ಹರಿಯಾಣದ ಪ್ರಮುಖ ಔದ್ಯೋಗಿಕ ನಗರವಾದ ಫರೀದಾಬಾದ್ ಸುತ್ತಮುತ್ತಲಿನ ಕಟಲ, ಲಕಡಪುರ, ಅಂತಪುರ, ಪೇವಲಾ ಮಹಾರಾಜಪುರ ಮೊದಲಾದ ಕಡೆಗಳಲ್ಲಿ ಈ ಗಣಿಗಳ ಮಾಲೀಕರು ಹಾಗೂ ಮಧ್ಯೆ ಇರುವ ದಲ್ಲಾಳಿಗಳು ಕೊಬ್ಬುತ್ತ ಹೋದಂತೆ ಹಗಲಿಡೀ ಬೆವರು ಸುರಿಸುವ ಗಣಿ ಕಾರ್ಮಿಕರು ಎಲುಬಿನ ಗೂಡುಗಳಾಗಿ ಪರಿವರ್ತಿತರಾಗುತ್ತಾ ಹೋಗುತ್ತಾರೆ. ಅತಿ ಹೆಚ್ಚಿನ ಸಂಖ್ಯೆಯಲ್ಲಿ ಕಲ್ಲುಗಳನ್ನು ಈ ಭಾಗಗಳ ಗಣಿಗಳಿಂದಲೇ ಪೂರೈಸಲಾಗುತ್ತದೆ. ಹಾಗಾಗಿ ಇಲ್ಲಿಯ ಗಣಿ ಕಾರ್ಮಿಕರಿಗೆ ಮೈ ತುಂಬಾ ದುಡಿತವಿದ್ದು ಗಣಿ ಮಾಲೀಕರಿಗೆ ಹಾಗೂ ದಲ್ಲಾಳಿಗಳಿಗೆ (ಇರುವೆಡೆಗಳಲ್ಲಿ ಗುತ್ತಿಗೆದಾರರಿಗೆ) ಖಜಾನೆ ತುಂಬಾ ಸಂಪತ್ತು ಇರುತ್ತದೆ. ಗಣಿಗಳಲ್ಲಿಂದ ತೆಗೆದು ನಯಮಾಡಲ್ಪಟ್ಟ ಕಲ್ಲುಗಳು ಪಟ್ಟಣ ಸೇರುತ್ತಾ ಹೋದಂತೆ ಪಟ್ಟಣದಲ್ಲೇ ಇರುವ ಮಾಲೀಕರ–ಗುತ್ತಿಗೆದಾರರ ಮನೆ–ಬಂಗಲೆಗಳು ಚಮಕಿಸುತ್ತಾ ಹೋಗುವುದನ್ನು ಈ ಗುಡ್ಡಗಾಡು ಪ್ರದೇಶಗಳಲ್ಲಿಯೇ ಗುಡಿಸಲುಗಳನ್ನು ಕಟ್ಟಿಕೊಂಡಿರುವ ಗಣಿ ಕಾರ್ಮಿಕರ ದೇಹ–ಮನಸ್ಸುಗಳು ಕಪ್ಪಾಗುತ್ತಾ, ಸಣ್ಣಗಾಗುತ್ತಾ ಹೋಗುತ್ತವೆ ದಟ್ಟ ಗುಡ್ಡಗಾಡು ಪ್ರದೇಶವಾದ ಇಲ್ಲಿ ಗಣಿ ಕಾರ್ಮಿಕರಿಗೆ ಅವರ ಕುಟುಂಬದ ಸದಸ್ಯರಿಗೆ ಯಾವುದೇ ರೀತಿಯ ಅನುಕೂಲತೆಗಳ ವ್ಯವಸ್ಥೆಯಿಲ್ಲ. ಅಷ್ಟೇ ಅಲ್ಲ ಜೀವವನ್ನೇ ಒತ್ತೆಯಿಟ್ಟಂತೆ ದುಡಿಯುವ ಈ ಗಣಿ ಕಾರ್ಮಿಕರ ಜೀವಕ್ಕೂ ಭದ್ರ ಯಿಲ್ಲ. ಕುಡಿಯುವ ನೀರಿಲ್ಲ; ಮಕ್ಕಳಿಗೆ ವೈದ್ಯಕೀಯ ಸೌಲಭ್ಯ ಹತ್ತಿರದಲ್ಲೆಲ್ಲೂ ಇಲ್ಲ; ಶಾಲೆಗಳಿಲ್ಲ. ಗುಡ್ಡಗಳಲ್ಲಿ ಅಲ್ಲಲ್ಲಿ ನಿಂತುಕೊಂಡಿರುವ ನೀರನ್ನೇ ಕುಡಿಯಲು ಹಾಗೂ ಇನ್ನಿತರ ಉದ್ದೇಶಗಳಿಗಾಗಿ ಬಳಸುವುದರ ಪರಿಣಾಮವಾಗಿ ಗಣಿ ಕಾರ್ಮಿಕರ ಮನೆಗಳಲ್ಲಿ ಒಂದಿಲ್ಲೊಂದು ಕಾಯಿಲೆ ಇದ್ದೇ ಇರುತ್ತದೆ. ಕನಿಷ್ಠ ಕೂಲಿಯು ದೊರಕುವುದಿಲ್ಲ; ಕೆಲಸದ ಭದ್ರತೆಯಿಲ್ಲ. ಹೀಗಾಗಿ ಕಾರ್ಮಿಕ ಅನಿವಾರ್ಯವಾಗಿ ಕಾಯಿಲೆ ಬಿದ್ದರೂ ಕಷ್ಟಪಟ್ಟು ದುಡಿಯಲು ಹೋಗುತ್ತಾನೆ. 7–8 ವರ್ಷದ ಮಕ್ಕಳೂ ಸಹ ಅರೆಬರೆ ಬಟ್ಟೆತೊಟ್ಟು ಕಲ್ಲು ಹೊರುವುದನ್ನು ಸಾಮಾನ್ಯವಾಗಿ ಕಾಣಬಹುದಾಗಿದೆ.

ಮೆವಲಾ ಮಹಾರಾಜಪುರದ ಗುಡ್ಡ ಇಂಥ ಕಲ್ಲುಗಳ ತವರಾಗಿದ್ದು ಸಂಪೂರ್ಣವಾಗಿ ಎಸ್.ಎಲ್.ಶರ್ಮಾ ಅಂಡ್ ಕಂಪನಿ ಮತ್ತು ಕರ್ತಾರ್ ಸಿಂಗ್ ಅಂಡ್ ಕಂಪನಿಗಳ ಒಡೆತನಕ್ಕೆ ಸೇರಿದೆ. ಈ ಪ್ರದೇಶದಲ್ಲೆಲ್ಲ ಎಸ್.ಎಲ್.ಶರ್ಮಾ ಅಂಡ್ ಕಂಪನಿಯ ಮಾತು ಯಾರೂ ಮೀರುವಂತಿಲ್ಲ. ಒರಿಸ್ಸಾ, ಮಹಾರಾಷ್ಟ್ರ, ಮದ್ರಾಸ್ ಮುಂತಾದ ದೂರದ ಭಾಗಗಳಿಂದ ಬಂದಿರುವ ಸುಮಾರು 2000ಕ್ಕೂ ಹೆಚ್ಚು ಕಾರ್ಮಿಕರು ಒಂದೇ ಕಂಪನಿಯಲ್ಲಿ ಕೆಲಸ ಮಾಡುತ್ತಿದ್ದಾರೆ.

ಗುಡ್ಡಗಳಲ್ಲಿ ಸಾಮಾನ್ಯವಾಗಿ ಇಬ್ಬಿಬ್ಬರು ಕೂಡಿ ಬಂಡೆಗಳನ್ನು ಒಡೆಯುತ್ತಾರೆ. ದಿನಕ್ಕೆ ಒಂದು ಗಾಡಿ ಕಲ್ಲು ಒಡೆಯುತ್ತಾರೆ. ಒಂದು ಗಾಡಿ ಕಲ್ಲು ಒಡೆಯಲು ಸುಮಾರು 27ರೂ. ಖರ್ಚು ಒದಗಿ ಆದಾಯ ಸುಮಾರು 40ರೂ. ದೊರಕುತ್ತದೆ. ಅಂದರೆ ದಿನವಿಡೀ ಕಲ್ಲು ಒಡೆದ ಇಬ್ಬರಿಗೆ ದೊರಕುವುದು 13ರೂ.ಗಳು ಮಾತ್ರ. ಒಟ್ಟಾರೆ ಈ ಎಸ್.ಎಲ್.ಶರ್ಮಾ ಮತ್ತು ಕಂಪನಿಯವರು ಸುಮಾರು 300ರೂ. ಖರ್ಚು ಮಾಡಿ ಪಡೆದ ಕಲ್ಲುಗಳನ್ನು ಪಟ್ಟಣಗಳಿಗೆ ಸುಮಾರು 750ರೂ.ಗಳಿಗೆ ಮಾರಾಟ ಮಾಡುತ್ತಾರೆ. ವಾಸ್ತವವಾಗಿ ಯೋಚಿಸಿದಾಗ ಸುಮಾರು 300ರೂ. ಬೆಲೆಬಾಳುವ ಗಣಿ ಕಾರ್ಮಿಕರ ಶ್ರಮವನ್ನು ಕೇವಲ 6ರೂ.ಗಳಿಗೆ ಕೊಳ್ಳುವ ಭೀಕರ ಪ್ರಮಾಣದ ಶೋಷಣೆ ಇಲ್ಲಿ ರಾಜಾರೋಷವಾಗಿಯೇ ನಡೆಯುತ್ತದೆ. ಹರಿಯಾಣದಲ್ಲಿ ಕನಿಷ್ಠ ಕೂಲಿ 11ರೂ. 60ಪೈಸೆ ಇರುವುದಾಗಿ ಸರ್ಕಾರ ಟಾಂಟಾಂ ಹೊಡೆದರೂ ಸಹ ಕಲ್ಲು ಒಡೆಯುವ ಕೆಲಸದಲ್ಲಿ ತೊಡಗಿರುವ ಈ ಕಾರ್ಮಿಕರಿಗೆ ಎಸ್. ಎಲ್. ಶರ್ಮಾ ಅಂಡ್ ಕಂಪನಿಯವರು ದಿನಕ್ಕೆ 5ರೂ. ಕೊಡುತ್ತಿದ್ದರೆ ಕರ್ತಾರ್ ಅಂಡ್ ಕಂಪನಿಯವರು 8 ಕೊಡುತ್ತಾರೆ.

ಈ ರೀತಿಯ ಭಯಂಕರ ಶೋಷಣೆಯ ವಿರೋಧಿಸುವ ಕಾರ್ಮಿಕರಿಗೆ ನಾನಾ ವಿಧ ಕಿರುಕುಳವನ್ನು ನೀಡಲಾಗುತ್ತದೆ. ಗುಡ್ಡ ಹಾಕಿಕೊಂಡ ಗುಡಿಸಲಿಗೂ ಸಹ ಬಾಡಿಗೆಯ ಬಲವಂತವಾಗಿ ವಸೂಲಿ ಮಾಡಲಾಗು ಗುತ್ತಿಗೆದಾರರು ಸಂಘವನ್ನು ಮಾಡಿಕೊಂ ವುದರಿಂದ ಸ್ವಾಭಿಮಾನಿ ಹಾಗೂ ಅನ್ಯಾ ವಿರೋಧಿ ಕಾರ್ಮಿಕರನ್ನು ಸುಲಭವಾಗಿ ಬ ಬಡಿಯುಬಲ್ಲವರಾಗಿದ್ದಾರೆ. ಅಂಥ ಕಾಮಿ ನಿಗೆ ಆದಾಯವೇ ಬಾರದಂತೆಯೂ ಮ ಬಿಡಲಾಗುತ್ತದೆ.

**ಸಂಘರ್ಷದ ದಾರಿಯತ್ತ :**

ಹರಿಯಾಣದ ಈ ಭಾಗಗಳ ಕಾರ್ಮಿಕ ಅರಿವನ್ನು ಮೂಡಿಸಿ ಸಂಘಟಿತ ಹೋರಾ ನಡೆಸುವತ್ತ ಯತ್ನಗಳನ್ನು ಹಲವು ಜನ ಸೇರಿ ಮಾಡತೊಡಗಿದರು. ಪ್ರಥಮ ಹ ದಲ್ಲಿ 1982ರ ಜನವರಿ 4ರಂದು ಸಭೆಯೊಂ ನ್ನು ಕರೆಯಲಾಯಿತು. 18ನೇ ಜನವರಿ 8 ರಂದು ಬೃಹತ್ ಬಹಿರಂಗ ಸಭೆ ನಡೆಸು ನಿರ್ಣಯವನ್ನು ಕೈಗೊಳ್ಳಲಾಯಿತು. ಹರಿಯ ಣದ ಶಾಸಕರೂ, ಅಖಿಲ ಭಾರತ ಜೀತದಾ ಗಳ ವಿಮೋಚನಾ ಸಂಘಟನೆಯ ಅಧ್ಯಕ್ಷರಾ ಅಗ್ನಿವೇಶ್ ಮುಂದಾಳತ್ವ ವಹಿಸಿಕೊಂಡರು.

ಯಾವುದೇ ರೀತಿಯ ಸಾಂಪ್ರದಾಯಿಕ ಯಿಲ್ಲದ ಬಹಿರಂಗ ಸಭೆಯು ಮಧ್ಯಾಹ್ನ 1 ಗಂಟೆಗೆ ಪ್ರಾರಂಭವಾಯಿತು. ಸಭೆಗೆ ಕಟಲ ಸರಾಯ್, ಮೇವಲಾ ಮಹಾರಾಜಪುರ (ಗದ ಖೋರ್) ಲಕಡ್‌ಪುರ, ಅನಂಗಪುರ್ ಮುಂತ ದ ಕಡೆಗಳಿಂದ ಕಾರ್ಮಿಕರು–ಸ್ತ್ರೀಯರು–ಮು ಳು ಬಂದು ನೆರೆದಿದ್ದರು. ಕಾರ್ಮಿಕರ ಯೂ ಯನ್‌ನ ಪ್ರಧಾನ ಕಾರ್ಯದರ್ಶಿ ವೇದಪ್ರಕಾ ವಿದ್ರೋಹಿ ಅವರು ಕಾರ್ಮಿಕರ ನ್ಯಾಯಯು ವಾದ ಬೇಡಿಕೆಗಳು ಈಡೇರುವ ತನಕ ಸಂಘರ್ಷ ದ ದಾರಿಯಿಂದ ಕದಲಲಾಗದೆಂದು ಸ್ಪಷ್ಟಪಡಿ ಕಾಂಗ್ರೆಸ್ ದಲ್ಲಾಳಿಗಳು ಬುದ್ಧಿ ಕಲಿಯಲ ಬೇಕಾಗುತ್ತದೆಂದು ಎಚ್ಚರಿಸಿದರು. ಕಾಮಿ ಕರ 8 ಅಂಶಗಳ ಬೇಡಿಕೆಗಳು 8ನೇ ಫೆಬ್ರವ 82ರೊಳಗೆ ಈಡೇರದೇ ಹೋದರೆ ಮುಂದಿ ಘಟನೆಗಳಿಗೆ ಸರ್ಕಾರ ಹಾಗೂ ಗಣಿ ಮಾಲೀಕರ ಗುತ್ತಿಗೆದಾರರೇ ಜವಾಬ್ದಾರರಾಗಬೇಕಾಗುತ

[15ನೇ ಪುಟಕ್ಕೆ]

---

## ಹೊರ ರಾಜ್ಯಗಳಲ್ಲಿ

---

ಏಕಲವ್ಯ

# ಪೋಲೀಸ್ ಕಿ ಬೇಟಿ

ನಾನು ಐದನೇ ಕ್ಲಾಸಿನಲ್ಲಿ ಓದುತ್ತಿದ್ದ ಸಮಯ. ನನ್ನ ಪಕ್ಕದ ಮನೆಯವರ ಹಿರಿ ಮಗ ಸಂಗ್ಯಾ ಆಗಾಗ್ಗೆ ಮನೆಗೆ ಬರುತ್ತಿದ್ದ. ಅದೊಂದು ವಿಚಿತ್ರ ಪರ್ಸನಾಲಿಟಿ. ಆತ ಎಲ್ಲಿ ಹೋಗುವವನು, ಎಲ್ಲಿ ಇರುವನು, ಏನು ಮಾಡುವನು, ಯಾವ ಹೆಸರಿನಿಂದ ಬದುಕುವನು ಎಂಬುದು ಯಾರಿಗೂ ತಿಳಿಯದ ವಿಷಯ. ಕಂಪನಿ ನಾಟಕಗಳಲ್ಲಿ ಪಾತ್ರ ವಹಿಸುವುದು, ಊರೂರುಗಳನ್ನು ಸುತ್ತುತ್ತಾ ಬೀದಿಗಳ ಮೇಲೆ ಸೈಕಲ್ ಸರ್ಕಸ್ ಮಾಡುತ್ತ ಹಣ ಕೂಡಿಸುವುದು, ಇವಾವೂ ಸಾಧ್ಯವಾಗದಾಗ ಲಾರಿಗಳನ್ನು ಓಡಿಸುವುದು. ಇವು ಅವನು ಮಾಡುತ್ತಿದ್ದ ಕೆಲಸಗಳಲ್ಲಿ ನಮಗೆ ಗೊತ್ತಿದ್ದ ಕೆಲವು. ಬಂದಾಗಲೆಲ್ಲ ಟ್ರಿಮ್ಮಾಗಿ ಬಟ್ಟೆಗಳನ್ನು ಹಾಕಿಕೊಂಡು ಓಡಾಡುತ್ತಿದ್ದ. ಅವನಿಗೆ ಗಲ್ಲಿಯ ಹಿರಿಯರನೇಕರು 'ಉಡಾಳ' ಎಂದೇ ಹೆಸರಿಟ್ಟಿದ್ದರು.

ಅವನು ಬಂದಾಗ ನಾನು ಹುರುಪಾಗಿರುತ್ತಿದ್ದೆ. ಆತ ದಿಲ್ಲಿ ಮುಂತಾದ ನಗರಗಳ ಬಗ್ಗೆ ಕಣ್ಣುಮುಂದೆ ಕಟ್ಟುವಂತೆ ಹೇಳುತ್ತಿದ್ದ. ತನ್ನ ಸಾಹಸಗಳ ಬಗ್ಗೆ ಜಂಬ ಕೊಚ್ಚಿಕೊಳ್ಳುತ್ತಿದ್ದ. ನಾನು ಅವನೊಡನೆ ತಿರುಗಾಡುವಾಗ ಕಂಪನಿ ನಾಟಕಗಳನ್ನು ಪುಕ್ಕಟೆ ನೋಡುವ ಅವಕಾಶವೂ ಸಿಗುತ್ತಿತ್ತು.

ಒಂದು ದಿನ ಹೀಗೇ ನಾಟಕ ಕಂಪನಿ ಕಡೆಗೆ ಕರೆದುಕೊಂಡು ಹೋಗಿ ನಟಮಿತ್ರರೊಡನೆ ಮಾತನಾಡುತ್ತ ಕುಳಿತು ಅದಾವುದೋ ನಾಟಕ ಕಂಪನಿಯಲ್ಲಿದ್ದಾಗ ತಾನು ಪ್ರೀತಿಸಿದ ಹುಡುಗಿಯ ಬಗ್ಗೆ ವಿಚಾರಿಸಿದ. ಅವಳು ಯಾವ ಕಂಪನಿಯಲ್ಲಿದ್ದಾಳೆ ಎಂಬುದು ಅಲ್ಲಿದ್ದ ಯಾರಿಗೂ ಹೊಳೆಯಲಿಲ್ಲ. ಅವಳ ಗುಣಗಾನ ಮಾಡಿದ. ತಾನು ಲಗ್ನವಾಗುವಷ್ಟು ಯೋಚನೆ ಮಾಡಿದ್ದು, ಆದರೆ ಪರಿಸ್ಥಿತಿ ಅನಾನುಕೂಲವಾದದ್ದು ವಿವರಿಸಿದ. ತಾನಿಲ್ಲದೆ ಅವಳು ಬದುಕಲು ಸಾಧ್ಯವೇ ಇಲ್ಲವೆಂದು ಹೇಳಿದ. ಆ ನಾಟಕದ ಜನ ಸಂಗ್ಯಾನ ಮಾತುಗಳನ್ನು ಬೆಲೆಕೊಡುವ ಹಾಗೆ ಗಂಭೀರವಾಗಿ ಕೇಳುತ್ತಿದ್ದರು. ತಾನು ಊರಲ್ಲಿ ಇಲ್ಲದಾಗ ಅವಳು ತನ್ನ ಫೋಟೊಗೆ ಹಾರ ಹಾಕಿ ಕೈ ಮುಗಿಯುತ್ತಿದ್ದಳೆಂದು ಹೇಳಿದಾಗ ಮುಂದಿದ್ದವರಿಗೆ ಸಹಿಸಿಕೊಳ್ಳಲು ಕಷ್ಟವೆನಿಸಿತು.

ರಾತ್ರಿ ೧೧ ಗಂಟೆಯವರೆಗೆ ತಿರುಗಾಡಿಸಿದ. ಕೊನೆಗೆ ಕಸಬಿನಿಯರ (ಸೂಳೆಯರ) ಗಲ್ಲಿಗೆ ಕರೆದುಕೊಂಡು ಹೊರಟ. "ಇಲ್ಲಿ ಬರಬಾರ್ದು ಅಂಥ ಹೇಳ್ತಾರ" ಎಂದು ಅಂದದ್ದಕ್ಕೆ "ಹಂಗ ಹೇಳವ್ರು ಕಳ್ಳ ಸೂಳೆ ಮಕ್ಳು" ಎಂದವನೇ ನನ್ನ ಕೈಹಿಡಿದುಕೊಂಡು ಹಾಗೆ ಮುನ್ನಡೆದ.

ದೊಡ್ಡ ಬಾಗಿಲಿನ ಒಂದು ಮನೆಯ ಅಟ್ಟ ಹತ್ತಿದೆವು. ಆ ವಿಶಾಲವಾದ ಕೋಣೆಯ ದೃಶ್ಯ ನನಗೆ ತೀರ ಹೊಸವೆನಿಸಿತು. ಅಲ್ಲೆಲ್ಲ ಜೋಡಿ ಜೋಡಿಯಾಗಿ ಕುಳಿತಿದ್ದರು. ಇಷ್ಟೊಂದು ಜನ ಗಂಡಹೆಂಡದಿರು ಶಾಂತ ರೀತಿಯಿಂದ ಮಾತನಾಡುತ್ತ ಕುಳಿತದ್ದು ನನಗೆ ಆಶ್ಚರ್ಯ ಹುಟ್ಟಿಸಿತು. ಗಂಡ–ಹೆಂಡಿರು ಜಗಳಾಡುತ್ತಾ, ಕಚ್ಚಾಡುತ್ತಾ, ಹೊಡೆದಾಡುತ್ತ ಅಳುವ–ನೋವಿನ ಪರಿಸರದಲ್ಲಿ ಬೆಳೆದ ನನಗೆ ಈ ಹಾಯಾಗಿ ಇರುವ ಜನ ಒಂದು ರೀತಿಯ ಸಮಾಧಾನ ಕೊಟ್ಟರು.

ನಾನು ಎಲ್ಲರ ಮುಖವನ್ನು ಒಂದೊಂದಾಗಿ ನೋಡುತ್ತ ಹೋದೆ. ಎಲ್ಲ ಹೆಂಗಸರೂ ಚೆನ್ನಾಗಿ ತಲೆಬಾಚಿಕೊಂಡಿದ್ದಾರೆ, ಮುಖಕ್ಕೆ ಪೌಡರು, ಕಣ್ಣಿಗೆ ಸುಖ ಕೊಡುವ ಸೀರೆಗಳು, ಒಂದಿಷ್ಟು ಅಮ್ಮಿ ಕಾಣುವಂಥ ಬ್ಲೌಜುಗಳು, ಕೈ ತುಂಬ ರಂಗುರಂಗಿನ ಬಳೆಗಳು, ಬಾಯಿ ತುಂಬ ಎಲೆಯಡಿಕೆ. ಜನ 'ಗಳಸವರು' ಎಂದು ಕರೆಯುವುದು ಇವರಿಗೇನೆ ಇರಬಹುದು ಎಂಬ ಗುಮಾನಿ ಶುರುವಾಯಿತು. ಅದೇನೇ ಇದ್ದರೂ ಅವರು ಅಷ್ಟೊಂದು ಸುಖವಾಗಿ ಇದ್ದದ್ದು ನನಗೆ ಹೊಸ ಅನುಭವವನ್ನು ಕೊಡುತ್ತಲಿತ್ತು.

ಹಾಡುಗಳು ಶುರುವಾದವು. ಸಿನೇಮಾ ಹಾಡುಗಳು. "ಪ್ಯಾರ್ ಕಿಯಾ ತೊ ಡರನಾ ಕ್ಯಾ" ಅವುಗಳಲ್ಲಿ ನನಗೆ ಇಂದಿಗೂ ನೆನಪಿದೆ. ಅಲ್ಲಿಯ ಕೆಲ ಹುಡುಗಿಯರು ಹಾಡಿಯಾದ ಮೇಲೆ ಪಕ್ಕಕ್ಕೆ ಸರಿದರು. ಮತ್ತೊಬ್ಬ ಹುಡುಗಿ ಮುಂದೆ ಬಂದಳು. ಅವಳು ಶಾಂತವಾಗಿದ್ದು ಮುಖದಲ್ಲಿ, ಉಡುಪಿನಲ್ಲಿ ಚಾಲಾಕಿತನವಿರಲಿಲ್ಲ. ಅವಳೂ ನನ್ನಂತೆಯೆ ಪರಕೀಯಳಾಗಿ ಕಾಣುತ್ತಿದ್ದಳು. ಸಂಗ್ಯಾ ಪಕ್ಕದಲ್ಲಿ ಕುಳಿತಾಕೆಗೆ ಇವಳಾರೆಂದು ಸನ್ನೆ ಮಾಡಿದ. ಅವಳು "ಪೋಲೀಸ್ ಕಿ ಬೇಟಿ" ಎಂದು ಪಿಸುಗುಟ್ಟಿದಳು.

ಅವಳು ಕುಣಿಯತೊಡಗಿದಳು. ಕುಣಿತದಲ್ಲಿ ಸೆಳೆತವಿರಲಿಲ್ಲ. ಎಲ್ಲರೂ ನಿರಾಶೆಗೊಂಡಂತೆ ಅನಿಸಿತು. "ಇನ್ನೊಂದ್ ಸಲಾ ಬರೂದ್ರಾಗ್ ಛಲೋ ಡಾನ್ಸ್ ಕಲಿತಿರತಾಳ್ರಿ" ಎಂದು ಆ ಪೋಲೀಸ್ ದೈನ್ಯದಿಂದ ಹೇಳಿದ. 'ರಿಯಾಯತಿ ಕೊಟ್ಟಿದ್ದೇವೆ' ಅನ್ನುವ ಹಾಗೆ ಕುಳಿತ ಜನ ತಮ್ಮೊಳಗೇ ಮಾತನಾಡುತ್ತಿತ್ತು. ವಿನಮ್ರವಾಗಿ ಇದ್ದ ಆ ಪೋಲೀಸ್ ಮಗಳ ಕಿವಿಯಲ್ಲಿ ಏನನ್ನೋ ಉಸುರಿದ. ಅವಳು ತಲೆ ಅಲ್ಲಾಡಿಸಿದಳು.

ಸಂಗ್ಯಾ ಯಾವುದನ್ನೂ ಹಚ್ಚಿಕೊಳ್ಳದೆ ಪಕ್ಕದವಳೊಡನೆ ಮಾತನಾಡುತ್ತಿದ್ದ. ಆಮೇಲೆ ಅವಳು ಕೂಡಿ ಬಂದವನೊಡನೆ ಹೊರಟು ಹೋದಳು. ಸಂಗ್ಯಾ ಮತ್ತೆ ಬೇರೆಯವರೊಡನೆ ಮಾತು ಪ್ರಾರಂಭಿಸಿದ. ....

ರಮಜಾನ ದರ್ಗಾ

## ರಾಮಾಯಣ ವಿಷವೃಕ್ಷ

[11ನೇ ಪುಟದಿಂದ]

ಣನು ದ್ರಾವಿಡನೆಂದೂ ಊಹಿಸಿ ರಾವಣನನ್ನು ಹೊಗಳಿಹಾಡುವುದು ಎಷ್ಟು ತಪ್ಪೆಂಬುದನ್ನೂ ರಂಗನಾಯಕಮ್ಮ ಸ್ಪಷ್ಟಪಡಿಸುತ್ತಾರೆ. ಅರಸನಾಗಿ, ಹೆಂಗಸರ ಬಗ್ಗೆ ಏನೇನೂ ಗೌರವಭಾವವಿಲ್ಲದ ಪುರುಷಾಹಂಕಾರಿಯಾಗಿ, ಹಣವಂತ ವರ್ಗದ ಪ್ರತಿನಿಧಿಯಾಗಿ ರಾವಣನೂ ರಾಮನಂಥವನೇ ಆಗಿದ್ದಾನೆ. ಸಾಮ್ರಾಜ್ಯಶಾಹಿಯ ಕಾಲವಲ್ಲಿ ಒಬ್ಬ ಅರಸ ಅದಕ್ಕಿಂತ ಭಿನ್ನವಾಗಿರಲು ಸಾಧ್ಯವೂ ಇಲ್ಲ. ಆದ್ದರಿಂದ ರಾವಣ ದ್ರಾವಿಡನೆಂದು ನಾವು ಎದೆ ತಟ್ಟಿಕೊಳ್ಳುವ ಅವಶ್ಯಕತೆಯೂ ಇಲ್ಲ.

ಆಧುನಿಕ ಸಾಹಿತ್ಯ ಕ್ಷೇತ್ರದಲ್ಲಿ ರಾಮಾಯಣ ವಿಷವೃಕ್ಷಂ ಓದಲೇಬೇಕಾದ ಕೃತಿ ಎನ್ನುವುದರಲ್ಲಿ ಸಂದೇಹವಿಲ್ಲ. ತೆಲುಗಿನ ಇನ್ನೊಬ್ಬ ಪ್ರಸಿದ್ಧ ಲೇಖಕಿ 'ರಾಮಾಯಣ ವಿಷವೃಕ್ಷ ಖಂಡನ' ಎಂಬ ಇನ್ನೊಂದು ರಾಮಾಯಣವನ್ನು ಕಥಾರೂಪದಲ್ಲಿ ಬರೆದರು. ರಾಮಾಯಣ ಮಹಾವೃಕ್ಷವೂ ಒಂದು ಬಂದಿದೆ. ರಂಗನಾಯಕಮ್ಮ ತಮ್ಮ ಶತ್ರುಪಕ್ಷದಲ್ಲಿ ಎಷ್ಟು ಹೆದರಿಕೆಯನ್ನು ಹುಟ್ಟಿಸಿದ್ದಾರೆ ಎಂಬುದಕ್ಕೆ ಈ ಪುಸ್ತಕಗಳೇ ಸಾಕ್ಷಿ. ....

## ಪ್ಲೇಗು

ಬಂದರೆ
ಜಮೀನುದಾರನಿಂದ
ಒಂದು ಮಾತು!
ಬಂದಂತೆ ಪ್ಲೇಗು
ಕೊಪ್ಪಲದ ಜನಕೆಲ್ಲ
ಅವನ ಓಡುತ್ತಿರುವ ನಾಯಿ
ಬೊಗಳುವಾಗ ;
ಭಯದಿಂದ ಕಂಪಿಸುವವು
ನಮ್ಮ ಹೃದಯಗಳೆಲ್ಲ
[ಕ್ರಾಂತಿ ಪೂರ್ವದ ದಿನಗಳಲ್ಲಿ
ಹಳ್ಳಿಯ ಜನ ಬರೆಯುತ್ತಿದ್ದ
ಗೋಡೆ ಬರಹಗಳಲ್ಲೊಂದು]

# ಕರ್ನಾಟಕ ಹೌಸಿಂಗ್ ಬೋರ್ಡ್, ಮೈಸೂರು ಡಿವಿಜನ್, ಮೈಸೂರು-5

## ಎಗ್ಸಿಕ್ಯೂಟಿವ್ ಇಂಜಿನಿಯರ್‌ರವರ ಕಾರ್ಯಾಲಯ, ಕರ್ನಾಟಕ ಹೌಸಿಂಗ್ ಬೋರ್ಡ್, ಮೈಸೂರು ಡಿವಿಜನ್, ಝಾನ್ಸಿಲಕ್ಷ್ಮೀಬಾಯಿ ರಸ್ತೆ, ಮೈಸೂರು—5

## ಟೆಂಡರ್ ಪ್ರಕಟಣೆ

ನಂ. ಕೆ ಹೆಚ್‌ಬಿ. ಇ ಎಂ ವೈ. ಡಿ ಎಂ. ಟಿ ಎನ್ ಡಿ. 9/81-82. ದಿನಾಂಕ : 1-3-1982

ಈ ಕೆಳಕಂಡ ಕಾಮಗಾರಿಗಳಿಗಾಗಿ ಕೆಳಗೆ ಸೂಚಿಸಲಾಗಿರುವ ಸೂಕ್ತ ದರ್ಜೆಯ ರಿಜಿಸ್ಟರ್ಡ್ ಕಂಟ್ರಾಕ್ಟರುಗಳಿಂದ ಮೊಹರಾದ ಶೇಕಡಾವಾರು ಟೆಂಡರುಗಳನ್ನು ದ್ವಿಪ್ರತಿಗಳಲ್ಲಿ ಕೆಳಗೆ ಸಹಿ ಮಾಡಿದವರು 18-3-1982ರ ಸಂಜೆ 4 ಗಂಟೆಯವರೆಗೆ ಸ್ವೀಕರಿಸುವರು. ಲಕೋಟೆಯ ಮೇಲೆ ಕಾಮಗಾರಿಯ ಹೆಸರನ್ನು ಬರೆದಿರಬೇಕು. ಸಾಧ್ಯವಾದಲ್ಲಿ ಟೆಂಡರುಗಳನ್ನು ಅದೇ ದಿನ ಟೆಂಡರುದಾರರ ಅಥವಾ ಅವರ ಅಧಿಕೃತ ಪ್ರತಿನಿಧಿಗಳ ಸಮ್ಮುಖದಲ್ಲಿ ತೆರೆಯಲಾಗುವುದು.

ಸೂಕ್ತ ದರ್ಜೆಯ ರಿಜಿಸ್ಟರ್ಡ್ ಕಂಟ್ರಾಕ್ಟರುಗಳಿಂದ, ನಿಗದಿತ ಟೆಂಡರ್ ಫಾರ್ಮ್ ಶುಲ್ಕದೊಂದಿಗೆ ಖಾಲೀ ಟೆಂಡರ್ ಫಾರ್ಮುಗಳಿಗಾಗಿ 12-3-1982ರಂದು ಅರ್ಜಿಗಳನ್ನು ಸ್ವೀಕರಿಸಲಾಗುವುದು. ನಿಗದಿತ ಟೆಂಡರ್ ಫಾರ್ಮುಗಳನ್ನು ದ್ವಿಪ್ರತಿಯಲ್ಲಿ 17-3-82ರಂದು ಡಿವಿಜನ್ ಕಾರ್ಯಾಲಯದಲ್ಲಿ ಕಾರ್ಯಾಲಯದ ವೇಳೆಯಲ್ಲಿ ಅರ್ಜಿ ಸಲ್ಲಿಸಿದ ಕಂಟ್ರಾಕ್ಟರುಗಳಿಗೆ ಕೊಡಲಾಗುವುದು. ಟೆಂಡರ್ ಫಾರ್ಮ್‌ನ ಬೆಲೆ ಮರುಪಾವತಿಯಾಗದು.

ಯಾವುದೇ ಅಥವಾ ಎಲ್ಲ ಟೆಂಡರುಗಳನ್ನು ಯಾವುದೇ ಕಾರಣವನ್ನು ನೀಡದೆ ತಿರಸ್ಕರಿಸುವ ಹಕ್ಕನ್ನು, ಟೆಂಡರ್ ಸ್ವೀಕರಿಸುವ ನ್ಯಾಯಸಮ್ಮತ ಅಧಿಕಾರಿ ಕಾಯ್ದಿರಿಸಿಕೊಂಡಿರುತ್ತಾರೆ.

ಖಾಲೀ ಟೆಂಡರ್ ಫಾರ್ಮುಗಳಿಗಾಗಿ ಅರ್ಜಿ ಸಲ್ಲಿಸುವಾಗ ಕಂಟ್ರಾಕ್ಟರುಗಳು ತಮ್ಮ ನೋಂದಾವಣೆ/ನೋಂದಾವಣೆಯ ನವೀಕರಣದ ಸರ್ಟಿಫಿಕೇಟಿನ ಒಂದು ಪ್ರತಿಯನ್ನು ಮಂಡಿಸಬೇಕು. ಇಲ್ಲದಿದ್ದರೆ ಟೆಂಡರ್ ಫಾರ್ಮುಗಳನ್ನು ಕೊಡಲಾಗುವುದಿಲ್ಲ.

**ಕಂಟ್ರಾಕ್ಟರುಗಳ ದರ್ಜೆ— III ಹಾಗೂ ಮೇಲಿನ ದರ್ಜೆ**

**ಕಾಮಗಾರಿ ಪೂರೈಸಲು ಕಾಲ ಮಿತಿ—ಮಳೆಗಾಲ ಹೊರತುಪಡಿಸಿ 9 ತಿಂಗಳು**

**ಟೆಂಡರ್ ಫಾರ್ಮುಗಳ ಬೆಲೆ—ರೂ.10+ಮಾರಾಟ ತೆರಿಗೆ+ಮಾರಾಟ ತೆರಿಗೆಯ ಮೇಲೆ ಸರ್‌ಛಾರ್ಜ್**

| ಸಂಖ್ಯೆ | ಸ್ಕೀಂ | ನಿರ್ಮಾಣದ ಪ್ರದೇಶ ಹಾಗೂ ಕಟ್ಟಡಗಳ ಸಂಖ್ಯೆ | ಗ್ರೂಫ್ ನಂ. | ಟೆಂಡರಿಗೆ ತೊಡಗಿಸಲಾಗಿರುವ ವೆಚ್ಚ | ಮುಂಗಡ ಠೇವಣಿ ಹಣ |
|---|---|---|---|---|---|
| 1 | ಎಲ್. ಐ. ಜಿ. | ಹುಡ್ಕೋ ಸ್ಕೀಂ ಆಶ್ರಯದಲ್ಲಿ ಮೈಸೂರಿನ ಜಯನಗರ-ತೊಣಚಿಕೊಪ್ಪಲ್ ಲೇ ಔಟ್‌ನ 3ನೇ ಹಂತದಲ್ಲಿ 51 ಎಲ್.ಐ.ಜಿ. ಕಟ್ಟಡಗಳ ನಿರ್ಮಾಣ. | ಎಫ್. | ರೂ. 4,05, 450 | ರೂ. 10, 137 |
| 2 | -ಅದೇ- | ಹುಡ್ಕೋ ಸ್ಕೀಂ ಆಶ್ರಯದಲ್ಲಿ ಮೈಸೂರಿನ ಜಯನಗರ-ತೊಣಚಿಕೊಪ್ಪಲ್ ಲೇ ಔಟ್‌ನ 3ನೇ ಹಂತದಲ್ಲಿ 52 ಎಲ್. ಐ. ಜಿ. ಕಟ್ಟಡಗಳ ನಿರ್ಮಾಣ. | ಹೆಚ್. | ರೂ. 4, 13, 400 | ರೂ. 10, 335 |
| 3 | ಇ.ಡಬ್ಲ್ಯು.ಎಸ್. | ಹುಡ್ಕೋ ಸ್ಕೀಂ ಆಶ್ರಯದಲ್ಲಿ ಮೈಸೂರಿನ ಜಯನಗರ-ತೊಣಚಿಕೊಪ್ಪಲ್ ಲೇ ಔಟ್‌ನ 3ನೇ ಹಂತದಲ್ಲಿ 76 ಇ. ಡಬ್ಲ್ಯು. ಎಸ್. ಕಟ್ಟಡಗಳ ನಿರ್ಮಾಣ. | ಕೆ. | ರೂ. 2, 88, 800 | ರೂ. 7, 220 |

ಮೇಲ್ಕಂಡ ಕಾಮಗಾರಿಗಳ ಬಗ್ಗೆ ಹೆಚ್ಚಿನ ವಿವರಗಳೇನಾದರೂ ಬೇಕಿದ್ದಲ್ಲಿ ಎಗ್ಸಿಕ್ಯೂಟಿವ್ ಇಂಜಿನಿಯರ್, ಕರ್ನಾಟಕ ಹೌಸಿಂಗ್ ಬೋರ್ಡ್, ಝಾನ್ಸಿಲಕ್ಷ್ಮೀ ಬಾಯಿ ರಸ್ತೆ,ಮೈಸೂರು-5 ಅವರ ಕಾರ್ಯಾಲಯದಿಂದ ಎಲ್ಲ ಕೆಲಸದ ದಿನಗಳ ಕಾರ್ಯಾಲಯದ ವೇಳೆಯಲ್ಲಿ ಪಡೆಯಬಹುದು. ಟೆಂಡರ್ ಸ್ವೀಕರಿಸುವ ಅಧಿಕಾರಿಯು ಯಾವುದೇ ಅಥವಾ ಎಲ್ಲ ಟೆಂಡರುಗಳನ್ನು ಯಾವುದೇ ಕಾರಣ ನೀಡದೆ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿಕೊಂಡಿರುತ್ತಾರೆ.

**ಸೂಚನೆಗಳು**

1. ರಿಜಿಸ್ಟರ್ಡ್ ಕಂಟ್ರಾಕ್ಟರ್‌ಗಳು ಲೋಕೋಪಯೋಗಿ ಇಲಾಖೆಯಲ್ಲಿ ಶಾಶ್ವತ ಠೇವಣಿಯನ್ನು ಹೊಂದಿದ್ದರೂ ಸಹ, ಟೆಂಡರುಗಳನ್ನು ಸಲ್ಲಿಸುವಾಗ ಜೊತೆಯಲ್ಲಿಯೇ ಅಗತ್ಯ ಮುಂಗಡ ಠೇವಣಿ ಹಣವನ್ನು ಸಂದಾಯ ಮಾಡಬೇಕು.
2. ಮುಂಗಡ ಠೇವಣಿ ಹಣವು ಎಗ್ಸಿಕ್ಯೂಟಿವ್ ಇಂಜಿನೀಯರ್, ಕೆ. ಹೆಚ್. ಬಿ. ಡಿವಿಜನ್, ಮೈಸೂರು ಇವರಿಗೆ ಪಾವತಿಯಾಗುವಂತೆ ಡಿಮ್ಯಾಂಡ್ ಡ್ರಾಫ್ಟ್ ರೂಪದಲ್ಲಿರಬೇಕು.
3. ಡಿಪ್ಲೊಮಾಧಾರಕರು ಅಥವಾ ಇಂಜಿನಿಯರಿಂಗ್ ಪದವೀಧರ ಕಂಟ್ರಾಕ್ಟರ್‌ಗಳೂ ಸಹ ಚಲಾವಣೆಯಲ್ಲಿರುವ ಇತ್ತೀಚಿನ ಸರಕಾರೀ ಆಜ್ಞೆಯ ರುಜುವಾತಿನೊಂದಿಗೆ ಶೇ. 1ರಂತೆ ಮುಂಗಡ ಠೇವಣಿ ಹಣವನ್ನು ರವಾನಿಸಬೇಕು.
4. ಟೆಂಡರುಗಳನ್ನು ಸಲ್ಲಿಸುವ ಮುನ್ನ ಕಂಟ್ರಾಕ್ಟರುಗಳು ಕರ್ನಾಟಕ ಹೌಸಿಂಗ್ ಬೋರ್ಡ್‌ನ ಕಂಟ್ರಾಕ್ಟ್ ನಿಯಮಗಳನ್ನು ಗಮನಿಸಬೇಕು. ಈ ನಿಯಮಗಳಿಗೆ ಅವರು ಬದ್ಧರಾಗಿರಬೇಕಾಗುತ್ತದೆ.

ಸಹಿ

ಎಗ್ಸಿಕ್ಯೂಟಿವ್ ಇಂಜಿನಿಯರ್

ಕರ್ನಾಟಕ ಹೌಸಿಂಗ್ ಬೋರ್ಡ್ ಮೈಸೂರು ವಿಭಾಗ, ಮೈಸೂರು-5

## ಗಣಿ ಕಾರ್ಮಿಕರ ಹೋರಾಟ

[12ನೇ ಪುಟದಿಂದ]

ದೂ ಎಚ್ಚರಿಕೆ ನೀಡಿದರು.
ಅನಂತರ ಮಾತನಾಡಿದ ಸ್ವಾಮಿ ಅಗ್ನಿವೇಶ್
ರು ಜಾತಿ–ಧರ್ಮಗಳನ್ನು ಮೀರಿ ಕಾರ್ಮಿ
ಒಂದಾಗಿ ಹೋರಾಟದ ದಾರಿಯನ್ನು
ಯಬೇಕೆಂದೂ ಹೇಳಿ ಅಂತಿಮ ಜಯ
ಕರದ್ದೇ ಎಂದು ಉತ್ಸಾಹ ನೀಡಿದರು.
ಬಹಿರಂಗ ಸಭೆಯಲ್ಲಿಯೇ ಹಲವರು ಸ್ತ್ರೀ
ರೂ ಸಹ ಸೇರಿದಂತೆ ಅನೇಕ ಕಾರ್ಮಿಕರು
ಮ್ಮ ಹೃದಯವಿದ್ರಾವಕ ಶೋಷಣೆಯ ಘಟ
ಳನ್ನು ಹೇಳಿಕೊಳ್ಳಲು ಪ್ರಾರಂಭಿಸಿದಾಗ
ಯಲ್ಲಿ ದಟ್ಟ ಮೌನ ವ್ಯಾಪಿಸಿತ್ತು.
18ನೇ ಜನವರಿ 82 ರಂದು ಸುಮಾರು
000 ಜನ ಗಣಿ ಕಾರ್ಮಿಕರು ಸೇರಿ ನಡೆಸಿದ
ಹಿರಂಗ ಸಭೆಯನ್ನು ಗಮನಿಸಿದ್ದ ಕಾಂಗ್ರೆ
ಸರು ಅವಸರವಸರವಾಗಿ 'ಗಣಿ ಕಾರ್ಮಿಕ
ಂಗ್ರೆಸ್' ಎಂಬ ಯೂನಿಯನ್ ಕಟ್ಟಿ 8ನೇ
ಬ್ರುವರಿ 82ರ ಮೊದಲೇ ತಾವು ಸಮ್ಮೇಳನ
ಡೆಸಿ ಕಾರ್ಮಿಕರ ಬೆಂಬಲ ಗಳಿಸಲು ತಂತ್ರ
ೂಡಿದರು. 27ನೇ ಜನವರಿ 82 ರಂದು
ಮ್ಮೇಳನ ಮೆರವಣಿಗೆ ನಡೆಸಲು ನಿರ್ಧರಿಸಿ
ಷ್ಟೇ ಯತ್ನಪಟ್ಟರೂ 200 ಜನರ ಮೆರವ
ಗೆ ನಡೆಸಲೂ ವಿಫಲರಾದರು. ಸಂಘಟನೆಯ
ಮ್ಮ ಯತ್ನ ವಿಫಲವಾದಾಗ ಗಣಿ ಕಾರ್ಮಿಕ
ನ್ನು ಹಾಗೂ ಕಾರ್ಮಿಕ ಸಂಘವನ್ನು ಬಗ್ಗು
ಡಿಯಲು ಹೊಂಚುಹಾಕಲು ಪ್ರಾರಂಭಿಸಿದರು.
31ನೇ ಜನವರಿ 82ರಂದು ಗದಾಖೋರ್
ಡ್ಡದಲ್ಲಿ ಮಾಲೀಕರ ಕಡೆಯ ಬಾಡಿಗೆ
ೂಂಡಾಗಳು ಕಾರ್ಮಿಕರ ಮೇಲೆ ಹಲ್ಲೆ ನಡೆಸಿ
ರು. ಮಾಲೀಕರು–ಗುತ್ತಿಗೆದಾರರು 'ಕಾರ್ಮಿಕ
ಂಘಕ್ಕೆ ಸೇರಿದರೆ ಪರಿಣಾಮ ಸರಿಯಾಗದು
ಂದು ಬಹಿರಂಗವಾಗಿಯೇ ಬೆದರಿಕೆ ನೀಡಲಾ
ಂಭಿಸಿದರು. ೧೮–೧–೮೨ರ ಬಹಿರಂಗ ಸಭೆ
ಲ್ಲಿ ಭಾಗವಹಿಸಿದ 'ಅಪರಾಧ'ಕ್ಕಾಗಿ ಕಟಲ್
ಡ್ಡದಲ್ಲಿ ಕೆಲಸಮಾಡುವ ಕಾರ್ಮಿಕರನ್ನು
ಯಗೊಳಿಸಲಾಗಿದೆ. ಈ ಬಗ್ಗೆ ದೂರು
ಡಲು ಕಾರ್ಮಿಕರು ಫರೀದಾಬಾದ್ N.I.T.
ನೇ ಪೋಲೀಸ್ ಠಾಣೆಯಲ್ಲಿ ಹೋದಾಗ
ವರನ್ನು ಪೋಲೀಸರೂ ಸಹ ಥಳಿಸಿದ್ದಾರೆ.
ಗಣಿಕಾರ್ಮಿಕರ ಮಧ್ಯದಲ್ಲಿಯೇ ವಾಸಿಸು
ರುವ ದಲಿತ ನಾಯಕ ಜಯಸಿಂಹ ಅವರ
ಪ್ರಯತ್ನಗಳಿಂದಾಗಿ ಗಣಿ ಕಾರ್ಮಿಕರು ಸುಸಂಘ
ತರಾಗಿ ತಮ್ಮ ಹಕ್ಕುಗಳಿಗಾಗಿ ಸಂಘರ್ಷದ
ಾರಿಯತ್ತ ನಡೆದಿದ್ದಾರೆ. 8ನೇ ಫೆಬ್ರುವರಿ
2ರ ಬೃಹತ್ ಪ್ರದರ್ಶನ ಯಶಸ್ವಿಗೊಳಿಸುವ
ಲ–ಹುಮ್ಮಸ್ಸು ಅವರಲ್ಲಿ ಕಾಣುತ್ತಿದೆ.

(ಋಣ: ಮ.ಕಿ.ಸೀ ಮತ್ತು ಸು.ಜಾ.ರ.)

Statement about ownership and other particulars about PANCHAMA.

### FORM IV

| | | |
|---|---|---|
| 1. | Title of Newspaper | PANCHAMA |
| 2. | Registration Number of the Newspaper | R.N. 29681/76 |
| 3. | Language/Languages in which it is published | Kannada |
| 4. | Periodicity of its publication and the day/days/dates on which it is published | Fortnightly |
| 5. | Retail price of the Newspaper | 50 paise |
| 6. | Publisher's Name<br>Nationality<br>Address of the owners | Sri H.Govindaiah<br>indian<br>Mastigudi, 2nd cross, Ashokapuram. Mysore-8 |
| 7. | Printer's Name<br>Nationality<br>Address | H.Govindaiah<br>indian<br>Mastigudi, 2nd cross, Ashokapuram, Mysore-8 |
| 8. | Editor's Name<br>Nationality<br>Address | Sri Ramadeva Rake<br>indian<br>Mastigudi, 2nd cross, Ashokapuram, Mysore-8 |
| 9. | True and precise account of the premises where the Printing is conducted | Vinyasa printers, 12th Main, 3rd cross, Saraswathipuram, Mysore-9 |
| 10. | Owner's Names | 1 H. Govindaiah<br>2 Ramadeva Rake<br>3 Shivaji Ganeshan<br>4 Shivamalla Devanur<br>5 Indudhara Honnapura |
| 11. | Place of Publication | MYSORE-560008 |

I H. GOVINDAIAH, hereby declare that the particulars given above are true to the best of my knowledge and belief.

MYSORE

H.GOVINDAIAH
Signature of Publisher

# ಆರ್ಮುಗಂ ಪ್ರಸಾದ್‌ಗೆ ನಿದ್ದೆ ಬಾರದಿರಲಿ



ಫೆಬ್ರುವರಿ 27ರ ರಾತ್ರಿ ಇಡೀ ನನಗೆ ನಿದ್ದೆ ಬರಲಿಲ್ಲ. ನನ್ನ ದೇಹದ ತುಂಬ ಸಂಕಟ ತುಂಬಿ ಯಾತನೆ ಪಡುತ್ತಿತ್ತು. ದಲಿತನ ಗರೀಬನ ಬೆಳಕಾದ ದಲಿತ ಸಂಘರ್ಷ ಸಮಿತಿಯು ಕರ್ನಾಟಕದ ದಲಿತ ಮಂತ್ರಿ ಶಾಸಕರ ಮನೆ ಮುಂದೆ ಫೆಬ್ರುವರಿ 27ರಂದು ಧರಣಿ ನಡೆಸಿದಾಗ ಕೆ. ಜಿ. ಎಫ್‌ನಲ್ಲಿ ಆರ್ಮುಗಂ ಬೆಂಬಲಿಗರು, ಮೈಸೂರಲ್ಲಿ ಶ್ರೀನಿವಾಸಪ್ರಸಾದ್ ಸತ್ಯಾಗ್ರಹಿಗಳ ಮೇಲೆ ಕೈಮಾಡಿ ಏಳೇಳು ಸಮುದ್ರದ ನೀರು ತಂದು ತೊಳೆದರೂ ಅಳಿಸಲಾಗದ ಪಾಪವನ್ನು ತಮ್ಮಗಳ ಕೈಗೆ ಅಂಟಿಸಿಕೊಂಡರು. ಈ ಪಾಪದ ಕೈನಂಥ ರಾಜಕೀಯದಲ್ಲಿ ಈ ಸರ್ಕಾರಿ ಲೆಕ್ಕದಲ್ಲೆ 1973ರಿಂದ ಇಲ್ಲಿನವರೆಗೆ ಸುಮಾರು ನಲವತ್ತು ಸಾವಿರ ದಲಿತರ ಮೇಲೆ ಹಲ್ಲೆ ಕೊಲೆಗಳಾಗಿದ್ದರೂ ಕಂಡೂ ಕಣ್ಮುಚ್ಚಿರುವ ದಲಿತ ಮಂತ್ರಿ ಶಾಸಕರ ಸತ್ತ ತನವನ್ನು ಎಚ್ಚರಿಸುವುದು ಧರಣಿಯದಾಗಿತ್ತು. ಈ ಮಂತ್ರಿ ಶಾಸಕರಾಗಿ ದಲಿತರೆನ್ನಿಸಿಕೊಂಡವರು ಒಂದೇ ಒಂದು ಸಲವಾದರೂ ಒಟ್ಟಾಗಿ 'ದಲಿತರ ಕೊಲೆ ಹಲ್ಲೆ ಇನ್ನು ಸಹಿಸೆವು' ಎಂದಿದ್ದರೆ ಕೇವಲ ಅಂದಿದ್ದರೆ–ಬೆಂಕಿಗೆ ಎಸೆಯಲ್ಪಟ್ಟ ಎಷ್ಟೋ ಕಂದಮ್ಮಗಳು ಇಂದೂ ಉಳಿದೂ ಉಸಿರಾಡುತ್ತಿದ್ದುವು. ದಲಿತರಾಗಿ ಈ ಧರೆ ಮೇಲೆ ಹುಟ್ಟಿದ್ದಕ್ಕೆ ದೇಹ ಅನ್ನುವುದನ್ನು ತುಕುಡ ತುಕುಡವಾಗಿ ಕತ್ತರಿಸಲ್ಪಟ್ಟಿದ್ದರಿಂದ ಉಸಿರು ಕಳೆದುಕೊಂಡ ಎಷ್ಟೋ ಜೀವಗಳು ಇಂದೂ ಜೀವಂತವಾಗಿರುತ್ತಿದ್ದುವು. ಇಂದು ಗಾಳಿಯಲ್ಲಿ ತೇಲಾಡುತ್ತಿರುವ ಅತ್ಯಾಚಾರಕ್ಕೆ ಒಳಗಾದ ನಮ್ಮ ಅಕ್ಕತಂಗಿಯರ ನಿಟ್ಟುಸಿರು ಆಕ್ರಂದನಗಳು ಇರುತ್ತಿರಲಿಲ್ಲ. ಇಷ್ಟಿದ್ದೂ ಇದೆಲ್ಲವುಗಳಿಂದಲೂ ದಲಿತ ಮಂತ್ರಿ ಶಾಸಕರಾಗೂ ದೂರವಿರುವುದರ ಕಠೋರ ಜಡಸ್ಥಿತಿಯನ್ನು ಮುಂದಿಟ್ಟು ಅವರ ಹೊಣೆಯನ್ನು ಪೆಚ್ಚಿಸಲು ಹೊರಟರೆ ಆರ್ಮುಗಂ ಪ್ರಸಾದ್‌ರು ಅರಿವಿಲ್ಲದವರಾದರು. ದಲಿತರನ್ನು ಇತರರು ಕೊಲ್ಲುವುದೂ ಇವರು ದಲಿತರಾಗೆ ದಲಿತರ ಮೇಲೆ ಕೈಮಾಡುವುದೂ ಎರಡೂ ಸಮಾನು. ಮೈಸೂರಲ್ಲಿ ಪ್ರಸಾದ್‌ಮನೆಮುಂದೆ ನಡೆಯುತ್ತಿದ್ದ ಧರಣಿ ಮಧ್ಯಾಹ್ನ ನಿಂತು ಛಿಕೋ ಎಂದಾಗ ಸ್ವಲ್ಪದುಡುಕುಸ್ವಭಾವದ ಪ್ರಸಾದ್‌ರ ತಮ್ಮ ಗಲಾಟೆ ಮಾಡಿ, ಈ ರೀತಿಯಾಗಿರಬೇಕೆಂದು ಕೊಂಡೆ ಆಮೇಲೆ ನಿಂತ ಧರಣಿಯನ್ನು ಮುಂದುವರಿಸಿ ರಾತ್ರಿಯಾದ ಮೇಲೆ ಪ್ರಸಾದೇ ಕೈಮಾಡಿದ್ದೆಂದು ತಿಳಿದು ತಲ್ಲಣಿಸಿ ಹೋದೆ. ಆ ರಾತ್ರಿ ಇಡೀ ಕೋಪವಿಲ್ಲದೆ ಸೇಡಿಲ್ಲದೆ ದ್ವೇಷವಿಲ್ಲದೆ ನಮ್ಮ ಸ್ಥಿತಿಗೆ ಸಂಕಟವೇ ನಾನಾಗಿ ಉರಿದಂತೆ ಉರಿದೆ.

ಹಿಂದೊಂದು ಕಾಲದಲ್ಲಿ ಆರ್ಮುಗಂ ಯುವಕರಾಗಿದ್ದಾಗ ದಲಿತ ಜನಾಂಗದ ಯಾತನಾಬಾಳಿಗೆ ಪ್ರತಿನಿಧಿ ಎನ್ನಿಸಿದ್ದರು. ದಲಿತರ ಮೇಲಿನ ಅನ್ಯಾಯ ಅತ್ಯಾಚಾರ ಪ್ರತಿಭಟಿಸುತ್ತಿದ್ದುದಕ್ಕಾಗಿ ಆ ಮಾಜಿ ತರುಣ ಆರ್ಮುಗಂ ಮೈಮೇಲೆ ಮುಖದಮೇಲೆ ಹೊಡೆತ ಬಡಿತಗಳು ಬಿದ್ದ ಗಾಯಗಳಿಂದಾದ ಗುರುತುಳಿಗಳನ್ನು ಈಗ ಹಾಲಿ ಆರ್ಮುಗಂರು ದೇಹದ ಗಾಯದ ಗುರುತುಗಳನ್ನು ಸೂಟಿನಿಂದಲೂ ಮುಖದ ಗಾಯದ ಗುರುತುಗಳನ್ನು ಗಡ್ಡದ ಕೂದಲುಗಳಿಂದಲೂ ಮುಚ್ಚಿಕೊಂಡು–ಹೀಗೆ ಮುಚ್ಚಿಕೊಂಡಂತೆಲ್ಲ ಇವರು ತಮ್ಮನ್ನೂ ತಾವು ಬಂದ ಸ್ಥಳವನ್ನು ಮರೆತು ಕಣ್ಮುಚ್ಚಿದರು. ಇದರಿಂದಾಗಿ 'ಕೊಲೆ ತಪ್ಪಿಸಿ ಎಂಬ ಕೂಗಿಗೇ' ಕೈಮಾಡುವಂತಾದರು. ಇತ್ತ ಶ್ರೀನಿವಾಸಪ್ರಸಾದ್ ಇನ್ನೂ ಆರ್ಮುಗಂ ಆಗಿಲ್ಲದಿದ್ದರೂ ದಲಿತರ ದನಿ ಮೇಲೆಯೋ ಕೈಎತ್ತಿ ಆರ್ಮುಗಂ ದಿಕ್ಕಲ್ಲಿ ಹೆಜ್ಜೆ ಇಟ್ಟರು.

ಈಗ ಆರ್ಮುಗಂ ತಮ್ಮ ಈ ಸ್ಥಿತಿಯನ್ನು ಸುಟ್ಟುಕೊಂಡು ಹದಿನೆಂಟು ವಯಸ್ಸಿನ ಕೂದಲಿರದ ಮುಖದ ಮೇಲೆ ಗಾಯದ ಗುರುತುಗಳುಳ್ಳ ತರುಣ ಆರ್ಮುಗಂ ಆಗಬಲ್ಲರೆ? ಹಾಲಿ ಆರ್ಮುಗಂ ಆಗುವ ದಿಕ್ಕಲ್ಲಿ ಹೊರಟಿರುವ ಪ್ರಸಾದ್ ಅದರಿಂದ ತಪ್ಪಿಸಿಕೊಂಡು ಉಳಿಯ ಬಲ್ಲರೆ? ಉಳಿಯಲಿ ಎಂದು ನನ್ನ ಆಸೆ. ಅರ... ಕ್ಕಾಗಿ ಬೀಸುತ್ತಿರುವ ಗಾಳಿಯಲ್ಲಿ ನಿಟ್ಟುಸಿರಿ... ತ್ತಿರುವ ಬೆಂಕಿಗೆಸೆಯಲ್ಪಟ್ಟ ಕಂದಮ್ಮಗ... ಸುಟ್ಟಮಾಂಸದ ವಾಸನೆಯು ಸೇರಲಿ; ದಲಿ... ರಾಗಿ ಹುಟ್ಟಿದ್ದಕ್ಕಾಗಿ ಕತ್ತರಿಸಲ್ಪಟ್ಟ ದೇಹಗ... ಮಾಂಸದ ರೋಧನ ಆರ್ಮುಗಂ ಪ್ರಸಾದ್‌ರಂ... ವರ ಕಿವಿಗೆ ಕೇಳಿಸಲಿ; ಕಣ್ಮುಂದೆ ಕಟ್ಟಿದಂತಿರಲಿ ಎದೆಯಲ್ಲಿ ಸಂಕಟತುಂಬಿ ಅರಿವಾಗಿ ದಲಿ... ಪ್ರತಿನಿಧಿಗಳಿಗೂ ನಿದ್ದೆ ಬಾರದಿರಲಿ. ...

## ಕನಕಪುರದಲ್ಲಿ ದ.ಸಂ.ಸ. ಸಮ್ಮೇಳನ

ಬೆಂಗಳೂರು ಜಿಲ್ಲೆಯ ಕನಕಪುರದ ದ.ಸಂ.ಸ ಫೆ 28ರಂದು ತಾಲೋಕು ಸಮ್ಮೇಳನವನ್ನು ನಡೆಸಿತು. ಮಣ್ಣು ತುಂಬಿದ ಬೀದಿಗಳಲ್ಲಿ 'ಧಿಕ್ಕಾರಗಳೊಂದಿಗೆ' ಹೊರಟ ಮೆರವಣಿಗೆಯೊಂದಿಗೆ ಸಮ್ಮೇಳನ ಪ್ರಾರಂಭವಾಯಿತು. ಎಂ. ಡಿ. ಗಂಗಯ್ಯನವರ ಅಧ್ಯಕ್ಷತೆಯಲ್ಲಿ ಸಿ. ಎ. ಮುನಿಯಪ್ಪ ಸಮ್ಮೇಳನವನ್ನು ಉದ್ಘಾಟಿಸಿದರು. ದಲಿತ ಸಂಘಟನೆಯ ಅನಿವಾರ್ಯತೆಯನ್ನು ದಲಿತರ ಸಾಮಾಜಿಕ ಸ್ಥಿತಿಗತಿಗಳನ್ನು ವೆಂಕಟೇಶ, ಮುನಿಎಲ್ಲಪ್ಪ, ದ... ಗೌಡರು ಮಾತನಾಡಿ ಜನತೆಗೆ ಹೋರಾಟದ ಕರೆಕೊಟ್ಟರು.

ಸಮ್ಮೇಳನದ ನಂತರ ಬಹಿರಂಗ ಸಭೆಯು ಬಿ.ಕೃಷ್ಣಪ್ಪನವರ ಅಧ್ಯಕ್ಷತೆಯಲ್ಲಿ ನೆಡೆಯಿತು.

ಈ ಪತ್ರಿಕೆಯು ರಾಮದೇವ ರಾಕೆ ಅವರ ಸಂಪಾದಕತ್ವದಲ್ಲಿ, ವಿನ್ಯಾಸ ಪ್ರಿಂಟರ್ಸ್, 12ನೇ ಮೇನ್, 3ನೇ ಕ್ರಾಸ್, ಮೈಸೂರು–9 ಇಲ್ಲಿ ಮುದ್ರಿಸಲ್ಪಟ್ಟು ಎಚ್.ಗೋವಿಂ... ಅವರಿಂದ ಪ್ರಕಟಿಸಲ್ಪಟ್ಟಿತು. ವಿಳಾಸ: ಮಾಸ್ತಿಗುಡಿ, 2ನೇ ಕ್ರಾಸ್, ಅಶೋಕಪುರಂ. ಮೈಸೂರು–570009.